ಟ್ಟದ ವರ್ಷ - ೨೦೧೧
೭೬

ಲ್ - ಜೂನ್
೨೦೦೮

# ಅನಿಕೇತನ

■ ಕರ್ನಾಟಕ ಸಾಹಿತ್ಯ ಅಕಾಡೆಮಿ ತ್ರೈಮಾಸಿಕ



# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿ ತ್ರೈಮಾಸಿಕ

ಏಪ್ರಿಲ್-ಜೂನ್ ೨೦೦೮

■ ಸಂಪಾದಕರು

ಡಾ. ಬಾಳಾಸಾಹೇಬ ಲೋಕಾಪುರ

ಪ್ರೊ. ಚನ್ನಪ್ಪ ಕಟ್ಟಿ

ಡಾ. ಶಿವಾನಂದ ಕೆಳಗಿನಮನಿ



ಕರ್ನಾಟಕ ಸಾಹಿತ್ಯ ಅಕಾಡೆಮಿ

ಕನ್ನಡ ಭವನ, ಜೆ.ಸಿ. ರಸ್ತೆ

ಬೆಂಗಳೂರು - ೫೬೦ ೦೦೨

ANIKETANA — A Literary Journal (Quarterly)
Edited by : Dr. Balasaheb Lokapur, Pro. Channappa Katti
Dr. Shivanand Kelaginamani

Registration No : 45646/68
ಸಂಪುಟ : ೧೯
ಸಂಚಿಕೆ : ೪
ಪ್ರತಿಗಳು : ೧೫೦೦
ಪುಟಗಳು : viii + ೧೧೨

ಪ್ರಧಾನ ಸಂಪಾದಕರು
**ಪ್ರೊ. ಎಂ. ಎಚ್. ಕೃಷ್ಣಯ್ಯ**
ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ

ಪ್ರಕಾಶಕರು
**ವಿ.ಎನ್. ಮಲ್ಲಿಕಾರ್ಜುನಸ್ವಾಮಿ**
**ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ**
ಕನ್ನಡ ಭವನ, ಜೆ.ಸಿ. ರಸ್ತೆ,
ಬೆಂಗಳೂರು- ೫೬೦ ೦೦೨

ಬಿಡಿ ಪ್ರತಿ : ರೂ ೩೦/-
ವಾರ್ಷಿಕ ಚಂದಾ : ರೂ ೧೦೦/-
ಆಜೀವ ಚಂದಾ : ರೂ ೩೦೦/-

ಮುಖಪುಟ ಕಲೆ : ಮಂಜುನಾಥ್ ಜಿ. ಹೆಗ್ಗಡೆ
ಕೃಪೆ : ಕರ್ನಾಟಕ ಲಲಿತಕಲಾ ಅಕಾಡೆಮಿ
ಮುಖಪುಟ ವಿನ್ಯಾಸ : ಅನಿಲ್‌ಕುಮಾರ್ ಆರ್.

ಅಕ್ಷರ ಜೋಡಣೆ : **ಕ್ರಿಯೇಟಿವ್ ಗ್ರಾಫಿಕ್ಸ್**
ಬೆಂಗಳೂರು - ೫೬೦ ೦೨೬

ಮುದ್ರಣ : **ರಶ್ಮಿ ಪ್ರಿಂಟರ್ಸ್**
ನಂ.೧೨ಬಿ, ೧ನೇ ಕ್ರಾಸ್, ಕಲಾಸಿಪಾಳ್ಯ ಹೊಸ ಬಡಾವಣೆ
ಬೆಂಗಳೂರು - ೫೬೦ ೦೦೨
ದೂ. : ೨೨೧೧೫೮೧೫, ಮೊ. : ೯೯೦೧೯೧೬೫೮೧

## ಸಂಪಾದಕೀಯ

ಬರುವುದೆನುಂಟೊಮ್ಮೆ
ಬರುವ ಕಾಲಕೆ ಬಹುದು
ಬಯಕೆ ಬರುವುದರ
ಕಣ್ಣನ್ನೆ ಕಾಣೋ

– **ಮಧುರ ಚೆನ್ನ**

ಒಂದಿಷ್ಟು ತಡವಾಗಿ ನಿಮ್ಮ ಕೈಗೆ ಅನಿಕೇತನವನ್ನು ಒಪ್ಪಿಸುತ್ತಿದ್ದೇವೆ. ಅದಕ್ಕಾಗಿ ನಮಗೆ ವಿಷಾದವಿದೆ. ಈ ಹೊತ್ತು ಕನ್ನಡ ಕನ್ನಡಿಗ ಕರ್ನಾಟಕದ ಕುರಿತು ಎಲ್ಲರೂ ಧೇನಿಸುವ ಹೊತ್ತು. ಕನ್ನಡಕ್ಕೆ ಶಾಸ್ತ್ರೀಯ ಭಾಷಾ ಸ್ಥಾನಮಾನ ಅಧಿಕೃತವಾಗಿ ಸಿಕ್ಕಿದೆ. ಆದರೆ ಅದರ ಸುತ್ತ ಇರುವ ಗೋಜಲುಗಳು, ಗೊಂದಲಗಳು, ಮುಗಿದಂತೆ ಕಾಣುವುದಿಲ್ಲ. ನಮ್ಮ ರಾಜ್ಯದ ಗಡಿಭಾಗವಾದ ಬೆಳಗಾವಿಯಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನ ಕನ್ನಡಿಗನ ಹೆಮ್ಮೆಯನ್ನು ಹೆಚ್ಚಿಸಿದೆ. ಸಾಗರೋಪಾದಿಯಲ್ಲಿ ಹರಿದು ಬಂದ ಜನ ಕನ್ನಡಿಗರು. ಯಾವುದೋ ದೊಡ್ಡದಕ್ಕೆ ಹಾತೊರೆಯುತ್ತಿರುವಂತೆ ಕನ್ನಡದ ಅಸ್ಮಿತೆಯನ್ನು ಮನಗಂಡವರಂತೆ ಸಹನೆಯಿಂದ ಲಕ್ಷ ಲಕ್ಷ ಜನ ಒಂದೆಡೆ ಕುಳಿತು ತಮ್ಮ ಅಸ್ತಿತ್ವದ ಅರಿವನ್ನು ಮೂಡಿಸಿದ್ದಾರೆ. ಆ ಮೂಲಕ ಗಡಿಭಾಗದ ಪುಂಡರಿಗೆ ಹೀಗೊಂದು ಪರೋಕ್ಷ ಎಚ್ಚರಿಕೆಯ ಸಂದೇಶವನ್ನು ಮುಟ್ಟಿಸಿದ್ದಾರೆ.

ಎದ್ದೇಳು ಕನ್ನಡಿಗ ಎನ್ನುವ ಮಾತನ್ನು ಈಗ ಆಡುವುದು ಸರಿಯಲ್ಲ ಎಂದು ಮನಗಂಡಿಸಿದ್ದಾರೆ. ಏಕೆಂದರೆ ಕನ್ನಡಿಗರು ಈಗ ಎಚ್ಚೆತ್ತುಕೊಂಡಿದ್ದಾರೆ. ನಮ್ಮ ಗಡಿ, ನೆಲ, ಜಲ, ಶಿಕ್ಷಣ, ಉದ್ದಿಮೆ, ನಮ್ಮ ಸಾಂಸ್ಕೃತಿಕ ಅನನ್ಯತೆ, ಧಾರ್ಮಿಕ ಕೇಂದ್ರಗಳು ಎಲ್ಲವನ್ನೂ ಈಗ ಹೊಸ ದೃಷ್ಟಿಕೋನದಿಂದ ನೋಡುವಂತಾಗಿದೆ.

ಪ್ರಾದೇಶಿಕ ಅಸಮಾನತೆ ಒಂದು ಸಣ್ಣ ನ್ಯೂನ್ಯತೆ ಅಷ್ಟೆ. ಅದನ್ನು ನಮ್ಮ ನಮ್ಮೊಳಗೆ ಸರಿ ಪಡಿಸಿಕೊಳ್ಳಬಹುದು ಆದರೆ ಸಾಂಸ್ಕೃತಿಕ ಅನನ್ಯತೆಯನ್ನು ಸಾಧಿಸುವುದು ದೊಡ್ಡದು. ಅದಾಗುತ್ತಿರುವುದು ಸಂತೋಷಕರವಾದ ಸಂಗತಿಯಾಗಿದೆ. "ಕನ್ನಡವು ಕನ್ನಡವ ಕನ್ನಡಿಸುವಂತಿರಬೇಕು" ಎಂದಿದ್ದರು ಬೇಂದ್ರೆ. ಈಗ ಅದಾಗುತ್ತಿದೆ.

ಈ ಸಂಚಿಕೆಯು ಮುಖ್ಯವಾಗಿ ಮಹಿಳಾ ಸಂಚಿಕೆಯಾಗಿ ಹೊರಬರುತ್ತಿದೆ. ಸಾಹಿತ್ಯದಲ್ಲಿ ಮಹಿಳೆ ಮತ್ತು ಪುರುಷ ಎಂಬ ವರ್ಗಭೇದವನ್ನು ನಾವು ಪುರಷ್ಕರಿಸುವುದಿಲ್ಲವಾದರೂ ಮಹಿಳೆಯ ಚಿಂತನಧಾರೆ ಮುಟ್ಟಿದ ಗಮ್ಯವನ್ನು ಒಂದೆಡೆ ನೋಡುವಂತೆ ಮಾಡುವುದು ನಮ್ಮ ಅಭಿಲಾಷೆಯಾಗಿದೆ. ಕಮಲಾದಾಸ್ (ಸುರಯ್ಯ) ಅಮೃತಾ ಪ್ರೀತಂ, ಮನ್ನು ಭಂಡಾರಿ ಅವರುಗಳ ಮನೋಜ್ಞ ಕಥೆಗಳು ಇಲ್ಲಿವೆ. ಹೆನ್ರಿತಲ್ಯಾಕ್ಸ್ ಎಂಬ ಆಫ್ರಿಕಾದ ಕಪ್ಪು ಮಹಿಳೆಯ ಅಮರಕಥೆ ಜಾಗತೀಕರಣದ ಇಂದಿನ ದಿನಮಾನಗಳಲ್ಲಿ ಕೆಳವರ್ಗದ ಮಹಿಳೆ ಹೇಗೆ ಅನಾದರಕ್ಕೆ ಒಳಗಾಗಿ ಶ್ರೀಮಂತರ ಕಪಟ ನಾಟಕದಲ್ಲಿ ಸಿಲುಕಿ ನಲುಗುತ್ತಾಳೆ ಎಂಬುದನ್ನು ತಿಳಿಸುವ ಲೇಖನ ಇದಾಗಿದೆ.

ಸೆಸ್ಲಾ ಮಿಲಾಜಾ ಅವರ ಕವನ ದೀರ್ಘ ಮೌನದ ಬಳಿಕ ನಿನ್ನೊಡನೆ ಮಾತಾಡುವೆ ಒಂದು ಅಪರೂಪದ ಕವನವಾಗಿದೆ. ಎಲ್.ಸಿ. ಸುಮಿತ್ರರವರ ಎಂದೆಂದೂ ಅಮರವಾಗಿರುವ ಮೆಕ್ಸಿಂಗ್ ಗಾರ್ಕಿ ಅವರ ಕಾದಂಬರಿ ತಾಯಿ ಕುರಿತಾದ ವಿಮರ್ಶಾ ಲೇಖನವಿದೆ. ಡಾ. ಸಿದ್ಧಗಂಗಮ್ಮ ಅವರು ಡಾ. ವೀಣಾ ಶಾಂತೇಶ್ವರ್ ಅವರೊಂದಿಗೆ ನಡೆಸಿಕೊಟ್ಟ ಸಂದರ್ಶನ ಎರಡನೇ ತಲೆಮಾರಿನ ಮಹಿಳಾ ಲೇಖಕಿಯರ ತಳಮಳವನ್ನು ತೆರೆದು ತೋರಿಸುತ್ತದೆ. ತಳವರ್ಗದ ವಚನಕಾರ್ತಿಯರ ಭಾಷೆ ಮತ್ತು ರೂಪಕಗಳ ಬಗ್ಗೆ ಡಾ. ಶಶಿಕಲಾ ಮೊರಬದ ಅವರು ಚಿಂತನೆ ಮಾಡಿದ್ದಾರೆ. ಇದರೊಂದಿಗೆ ಡಾ. ಕೆ.ಬಿ. ಸರಸ್ವತಿಯವರ ಜಾಗತೀಕರಣ ಮತ್ತು ಮಹಿಳಾ ಚಿಂತನೆ ಎಂಬ ಲೇಖನಗಳು ಈ ಸಂಚಿಕೆಯನ್ನು ಸರ್ವಾಂಗ ಸುಂದರಗೊಳಿಸಿವೆ.

ಈ ಸಂಚಿಕೆಯನ್ನು ರೂಪಿಸಲು ಅವಕಾಶ ನೀಡಿದ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಪ್ರೊ. ಎಂ.ಎಚ್. ಕೃಷ್ಣಯ್ಯ ಅವರಿಗೂ ರಿಜಿಸ್ಟ್ರಾರ್ ಆದ ವಿ.ಎನ್. ಮಲ್ಲಿಕಾರ್ಜುನಸ್ವಾಮಿಯವರಿಗೂ ಲೇಖನಗಳನ್ನು ಕೊಟ್ಟು ಸಹಕರಿಸಿದ ಲೇಖಕರನ್ನು ಹಾಗೂ ಅಕಾಡೆಮಿಯ ಮಾನ್ಯ ಸದಸ್ಯರುಗಳನ್ನು ಕೃತಜ್ಞತೆಯಿಂದ ನೆನೆಯುತ್ತೇವೆ.

**ಸಂಪಾದಕರು**

## ಪರಿವಿಡಿ

# ಕೊನೆಯ ಅತಿಥಿ

## (ಸಣ್ಣ ಕಥೆ)

- ಮೂಲ ಮಲಯಾಳಂ – ಕಮಲಾದಾಸ್
- ಕನ್ನಡಕ್ಕೆ – ಪಾರ್ವತಿ ಜಿ. ಐತಾಳ್

ಬೆಳಗ್ಗೆ ಬಹಳ ಬೇಗನೆ ಎದ್ದು ರೂಢಿಯಾಗಿದವರಿಂದ ಅಂದು ಕೂಡಾ ಐದೂವರೆಯಾಗುವಷ್ಟರಲ್ಲಿ ಮಿಸ್ಟರ್ ಮಿತ್ರ ಅವರಿಗೆ ಎಚ್ಚರವಾಯಿತು. ಹೊರಗೆ ರಸ್ತೆಗೆ ಜೀವ ಕೂಡುತ್ತಿತ್ತು. ಮೊದಲ ಬಸ್ಸು ಭಾರವೇರಿಸಿಕೊಂಡು ಬಸ್‌ನಿಲ್ದಾಣದಿಂದ ಹೊರಟಿತ್ತು. ಹುಚ್ಚನೂ ಎದ್ದಿದ್ದ. ರಾತ್ರಿ ಬಂದು ನನ್ನ ಹಣವೆಲ್ಲವನ್ನೂ ಕದ್ದುಕೊಂಡದ್ದು ಯಾರು? ಅವರು ಗಟ್ಟಿಯಾಗಿ ಗುಡುಗಿದರು. ಮಿಸ್ಟರ್ ಮಿತ್ರ ಬೇಗ ಬೇಗನೆ ಕಿಟಕಿ ಮುಚ್ಚಿದರು. ಕೂಡಲೇ ಏರ್‌ಕಂಡೀಷನರ್‌ನ ಸ್ವಿಚ್ ಒತ್ತಿದರು. ಅದು ಅವರಿಗೆ ರೂಢಿಯಾಗಿತ್ತು. ತನ್ನ ಹೆಂಡತಿಗೆ ತಂಪಿರುವ ಕೋಣೆಯಲ್ಲಿ ಮಲಗಬೇಕೆಂಬ ಆಸೆ. ತನಗೋ ತಂಪೆಂದರೆ ಅಸಹನೀಯ. ಆದ್ದರಿಂದ ಅವಳು ನಿದ್ದೆಗೆ ಜಾರುತ್ತಲೇ ತಾನು ಏರ್‌ಕಂಡೀಷನರ್ ನಿಲ್ಲಿಸಿ ಒಂದು ಕಿಟಕಿ ತೆರೆದಿಡುತ್ತಿದ್ದೆ. ನಂತರ ಆ ಸ್ವಿಚ್ ಆನ್ ಮಾಡುತ್ತಿದ್ದುದು ಬೆಳಗ್ಗೆ ತಾನು ಎದ್ದ ಕೂಡಲೇ ಆ ಮೋಸದ ಬಗ್ಗೆ ಅವಳಿಗೆ ಯಾವ ಸಂದೇಹವೂ ಬರುತ್ತಿರಲಿಲ್ಲ. ಸಂದೇಹ ಬಂದರೂ ಅವಳದನ್ನು ಒಮ್ಮೆಯೂ ಪ್ರಕಟಪಡಿಸಿದ್ದಿಲ್ಲ. ಅವಳು ಯಾವಾಗಲೂ ಓರ್ವ ಸದ್ಗೃಹಿಣಿಗೆ ಹೇಳಿಸಿದಂಥ ಕೆಲಸಗಳನ್ನು ಮಾತ್ರವೇ ಮಾಡುತ್ತಿದ್ದುದು. ತನಗೆ ಎಷ್ಟೋ ಬಾರಿ ಅವಳ ನಿಷ್ಕಪಟ ವರ್ತನೆಯ ಮುಂದೆ ಒಂಥರಾ ಅಪರಾಧಿಭಾವನೆಯ ಅನುಭವವಾಗುವುದಿದೆ.....

ಅವರು ಮಂಚದತ್ತ ನೋಡಿದರು. ಮುದ್ದೆಯಾಗಿ ಬಿದ್ದ ಹೊದಿಕೆಯೊಳಗೆ ಅವಳಿರಬಹುದೆಂದು ಅವರು ಎಣಿಸಿದರು. ಅವಳು ಅಲ್ಲೆಲ್ಲೂ ಇರಲಿಲ್ಲ. ಹಾಗಾದರೆ ಹಿಂದಿನ ರಾತ್ರಿಯ ಸತ್ಕಾರಕೂಟ ಮುಗಿದ ನಂತರ ಸ್ವಾಗತ ಕೋಣೆಯಲ್ಲೋ ವರಾಂಡದಲ್ಲೋ ಹೋಗಿ ಮಲಗಿರಬಹುದು. ತಲೆನೋಯುತ್ತಿದ್ದಾಗ ಸಾಮಾನ್ಯವಾಗಿ ಅವಳು ವರಾಂಡದಲ್ಲಿ ಮಲಗುವುದಿದೆ. ಬೆಳದಿಂಗಳಲ್ಲಿ ಮಲಗುವುದೆಂದರೆ ಅವಳಿಗೆ ಬಹಳ ಪ್ರಿಯವಾಗಿತ್ತು. 'ನೀನು ಕವಯಿತ್ರಿಯಾದುದರಿಂದ ಬೆಳದಿಂಗಳಲ್ಲಿ ಮಲಗಲು ಆಸೆಪಡುತ್ತೀ' ನಾನು ಹಲವು ಬಾರಿ ಹೇಳಿದ್ದೆ. ಬೇರೆಯವರಿಗೆ ಬೆಳದಿಂಗಳೆಂದರೆ ಭಯ. ಅದು ಹುಚ್ಚು ಹಿಡಿಸುತ್ತದೆಂದು ನಾನು ಕೇಳಿದ್ದೇನೆ.

ಹೆಂಡತಿಯನ್ನು ಹುಡುಕುತ್ತ ಅವರು ಸ್ವಾಗತ ಕೋಣೆಗೆ ಹೋದರು. ಅಲ್ಲೆಲ್ಲ ಗಲೀಜು ತುಂಬಿದೆಯೆಂದು ಅವರಿಗನ್ನಿಸಿತು. ಹಿಂದಿನ ದಿನ ಕುಡಿದಿಟ್ಟ ಗ್ಲಾಸುಗಳು ಮೇಜಿನ ಮೇಲೆ ಹಾಗೇ ಬಿದ್ದಿದ್ದವು. ಅವುಗಳೊಳಗೆ ಮದ್ಯ ಕುಡಿಯಲೆಂದು ಬಂದ ಹಾತೆಗಳು ಸತ್ತು ಹೋಗಿದ್ದವು. ನೆಲದ ಮೇಲೆ ಸಿಗರೇಟು ಮೊಂಡುಗಳು ಚೆಲ್ಲಿಕೊಂಡಿದ್ದವು. ಆ್ಯಷ್ ಟ್ರೇ ಇದ್ದರೂ ಇವರು ಯಾಕೆ ಹೀಗೆ ನೆಲ ಹಾಳುಮಾಡುತ್ತಾರೆ? ಅವರು ತನ್ನಲ್ಲೇ ಹೇಳಿಕೊಂಡರು. ಕವಿಗಳು ಪತ್ರಿಕೆಯವರು ಶುದ್ಧ ಕಾಡುಜನರು! ಇವರನ್ನೆಲ್ಲ ಮನೆಗೆ ಆಮಂತ್ರಿಸಿ ಊಟವನ್ನೂ ಮದ್ಯವನ್ನೂ ಕೊಟ್ಟು ಪೂಜೆ ಮಾಡುವ ತನ್ನ ಹೆಂಡತಿಯನ್ನು ಶಿಕ್ಷಿಸಬೇಕು. ಎಷ್ಟೊಂದು ಹಣವನ್ನು ಅವಳು ಹೀಗೆ ಔತಣಕೂಟಗಳಿಗಾಗಿ ಖರ್ಚುಮಾಡುತ್ತಾಳೆ! ವಿರೋಧಿಸಿದರೆ ಪ್ರಯೋಜನವಿಲ್ಲವಲ್ಲ? ಅವಳು ಸಂಪಾದಿಸುವ ಹಣ ತಾನೆ? ಅವಳ ಔದಾರ್ಯದಿಂದ ತಾನೇ ತಾನೂ ತನ್ನ ಏಕಮಾತ್ರ ಪುತ್ರ ರಮೇಶನೂ ಇಲ್ಲಿ ಧನಿಕರಂತೆ ಬದುಕುತ್ತಿರುವುದು? ನಡುನಡುವೆ ಇವೆಲ್ಲವನ್ನು ಬಿಟ್ಟು ಪುನಃ ಘಾನಾಕ್ಕೆ ಹೋದರೆ ಹೇಗೆಂದು ಅನ್ನಿಸುವುದಿದೆ. ಅಲ್ಲಿ ತಾನು ಹಿಂದೆ ಜೀವಿಸಿದ್ದ ಹಳ್ಳಿಯಿದೆಯಲ್ಲ? ತನ್ನ ಮನೆಯೂ ಕೂಡಾ ಪ್ರಾಯಶಃ ಅಲ್ಲಿ ಈಗ ಯಾವುದಾದರೂ ಮುಸಲ್ಮಾನ ಕುಟುಂಬ ವಾಸಿಸುತ್ತಿರಬಹುದು.

ಸಿಗರೇಟು ಮೊಂಡುಗಳನ್ನು ಹೆಕ್ಕಿ ಆ್ಯಷ್‌ಟ್ರೇಯಲ್ಲಿ ಹಾಕಿ ಅವರು ಅಡುಗೆ ಮನೆಯತ್ತ ನೋಡಿ ಕೂಗಿ ಹೇಳಿದರು : 'ಜಗೋಂ, ಇಲ್ಲಿ ನೋಡು ಒಂದು ಚಹ ಬೇಕು.'

ಅಡುಗೆಮನೆಯಿಂದ ಹೊರಬಂದು ನೋಡಿದ ಕೆಲಸದಾಕೆ ಅವರನ್ನು ನೋಡಿ ಮುಗುಳುನಕ್ಕಳು. ಬಿಸಾ ಅವಳ ಹೆಸರು. ಮಧುಪ್ರೂರ್ ಎಂಬ ಹಳ್ಳಿಯಲ್ಲಿ ಹುಟ್ಟಿ ಬೆಳೆದವಳು. ಸುಂದರಿ. ಮೂವತ್ತೈದಾಗಿರಬಹುದು. ತನ್ನನ್ನು ಆಗಾಗ ಕಾಮಾತುರನನ್ನಾಗಿಸುತ್ತಾಳೆ. ಒಮ್ಮೆ ಅವಳನ್ನು ತನ್ನವಳನ್ನಾಗಿಸುವ ಅವಕಾಶ ಸಿಗದಿರಲಾರದು. ಹೆಂಡತಿ ಎಲ್ಲಿಗಾದರೂ ಭಾಷಣ ಮಾಡಲು ಹೋದಾಗ, ತಾನು ಎಲ್ಲಿ

ಕಿಟಕಿಬಾಗಿಲುಗಳನ್ನು ಮುಚ್ಚಿ ಈ ಕಪ್ಪುಹೆಣ್ಣನ್ನು ಬಿಗಿಯಾಗಿ ತಬ್ಬಿಕೊಂಡು ಬಿಡುತ್ತೇನೆ. ತನ್ನನ್ನು ನೋಡಿ ಯಾವಾಗಲೂ ಮುಗುಳ್ನಕ್ಕ ತಪ್ಪಿಗಾಗಿ ಮಧುರವಾದ ಶಿಕ್ಷೆಯನ್ನು ಅವಳು ಅಂದು ಅನುಭವಿಸುತ್ತಾಳೆ.

ಅವರು ಸುತ್ತಲೂ ನೋಡಿದರು. ತನ್ನ ಹೆಂಡತಿ ಎಲ್ಲಿ? ವೆರಾಂಡದಲ್ಲಿರುವ ಮಂಚ ಕೂಡಾ ಖಾಲಿಯಾಗಿದೆ.

"ನೀನಾ, ಒಡತಿ ಎಲ್ಲಿ?" ಅವರು ಕೇಳಿದರು. "ನಿದ್ದೆ ಮಾಡ್ತಾ ಇಲ್ಲವೆ?" ಅವಳು ಕೇಳಿದಳು. 'ನಾನು ಇವತ್ತು ಬೆಳಗ್ಗೆ ನೋಡಿಲ್ಲವಲ್ಲ. ನೀವೂ ನೋಡಿಲ್ವ ಒಡೇರಾ' ಅವರು ಸುಮ್ಮನೆ ತಲೆಯಾಡಿಸಿದ. ಇದ್ದಕ್ಕಿದ್ದಂತೆ ಕೆಲಸದಾಕೆ ಗಟ್ಟಿಯಾಗಿ ಚೀರುತ್ತ ನೆಲದ ಮೇಲೆ ದೊಪ್ಪೆಂದು ಜ್ಞಾನ ತಪ್ಪಿಬಿದ್ದಳು. ಅವಳು ನೋಡಿದ ದೃಶ್ಯವನ್ನು ಅವನೂ ನೋಡಿದ ದೊಡ್ಡ ಸೋಫಾದ ಹಿಂದೆ ಮಲಗಿದ್ದಳು ಆ ಮನೆಯ ಒಡತಿ. ಬಿಳೀ ಸೀರೆಯ ಮಧ್ಯೆ ರಕ್ತದ ಕಲೆಗಳು ಎದೆಯಲ್ಲಿ ಕಠಾರಿ ಆಕೆಯ ಮುಖವನ್ನು ನೋಡಲು ಅವರಿಗೆ ಧೈರ್ಯವಾಗಲಿಲ್ಲ: ಆದರೆ ಅವರು ಆಕೆಯ ಖಡಗೈ ಎತ್ತಿ ಹಿಡಿದು ನಾಡಿ ಪರೀಕ್ಷಿಸಿ ನೋಡಿದರು. ತಣ್ಣಗಾದ ಆ ಕೈಯಲ್ಲಿ ನಾಡಿ ಮಿಡಿತವಿರಲಿಲ್ಲ.

ಕೆಲಸದಾಕೆಗೆ ಬೋಧವಿಲ್ಲ. ಈಗ ತಾನೇನು ಮಾಡುವುದು? ಅವರು ತನ್ನಲ್ಲೇ ಕೇಳಿಕೊಂಡರು. ಪೋಲೀಸರಿಗೆ ತಿಳಿಸಬೇಕೆ? ಅಥವಾ ಮಗನನ್ನು ಎಬ್ಬಿಸಬೇಕೆ? ರಮೇಶನಿಗೆ ಈ ಸಾವಿನಿಂದ ದುಃಖವಾಗಲಾರದು. ಯಾಕೆಂದರೆ ಅವನು ಮತ್ತು ಅವಳ ಮಧ್ಯೆ ಯಾವುದೇ ಪ್ರೀತಿ ಇಲ್ಲವಾಗಿ ವರ್ಷಗಳೆರಡು ಸಂದಿವೆ. ರಮೇಶ ರೋಡೆರಿಕ್ಸ್‌ನ ಮಗಳೂ, ನಗರದ ಒಂದು ಬ್ಯೂಟಿ ಪಾರ್ಲರಿನಲ್ಲಿ ಕೂದಲು ಕತ್ತರಿಸುವವಳೂ ಆದ ಲೀಸಾಳನ್ನು ಪ್ರೇಮಿಸತೊಡಗುವುದರೊಂದಿಗೆ ಅವರಿಬ್ಬರ ನಡುವೆ ಶೀತಲ ಸಮರ ಆರಂಭವಾಗಿತ್ತು. ಲೀಸಾಳನ್ನು ಮದುವೆ ಮಾಡಿಕೊಳ್ಳುವುದಾದರೆ ಮೊದಲು ತನ್ನ ಮನೆಯಿಂದ ಗಂಟುಮೂಟೆ ಕಟ್ಟಿ ಹೊರಗಿಳಿಯಬೇಕೆಂದು ರಮೇಶನ ಹತ್ತಿರ ಚಿಕ್ಕಮ್ಮ ಹೇಳಿದ್ದಳು. ಲೋಕ್ಲಾಸ್ ಹೆಣ್ಣುಗಳು ಬಂದು ವಾಸಿಸಲಿಕ್ಕಲ್ಲ ತಾನು ಕಷ್ಟಪಟ್ಟು ಕಟ್ಟಿಸಿದ ಈ ಬಂಗಲೆ ಇರುವುದೆಂದು ಆಕೆ ಹೇಳಿದ್ದಳು.

"ನೀವು ನನ್ನ ನಿಜವಾದ ಅಮ್ಮನಾಗಿದ್ದರೆ ಹೀಗೆ ಹೇಳುತ್ತಿರಲಿಲ್ಲ" ರಮೇಶ ಹೇಳಿದ.

ರಮೇಶನ ಅಮ್ಮ ಅವನಿಗೆ ಹತ್ತು ವರ್ಷ ವಯಸ್ಸಾಗಿದ್ದಾಗ ಸತ್ತು ಹೋಗಿದ್ದಳು. ಆ ನಂತರ ಮಗನನ್ನೂ ಕರೆದುಕೊಂಡು ತಾನು ಕವಯತ್ರಿ ಅನಸೂಯಾದೇವಿಯ ಮನೆಯ ಪಕ್ಕ ಬಾಡಿಗೆ ಮನೆ ತೆಗೆದುಕೊಂಡು ವಾಸಿಸತೊಡಗಿದ. ಮೊದ ಮೊದಲು ಆಕೆಗೆ ಆಕರ್ಷಣೆ ಕಂಡಿದ್ದು ಹುಡುಗನ ಬಗ್ಗೆ ಮಾತ್ರವಾಗಿತ್ತು. ಅವನಿಗೆ ಸಿಹಿ ತಿಂಡಿ ಕೊಡುವುದು,

ಅವನನ್ನು ಸಿನಿಮಾ ಸರ್ಕಸ್ಸುಗಳಿಗೆ ಕರೆದೊಯ್ಯುವುದು... ಹೀಗೆ ಆ ಬಂಧ ಬೆಳೆಯಿತು. ಅದು ಈ ಮದುವೆಯಲ್ಲಿ ಪರ್ಯವಸಾನಗೊಂಡಿತು. ತನ್ನ ಅದೃಷ್ಟವೆಂದೇ ಹೇಳಬೇಕು. ಇಲ್ಲದಿದ್ದರೆ ತಾನು ಇನ್ನೂ ಕಷ್ಟ ಪಟ್ಟು ಜೀವನ ಸಾಗಿಸುವ ಒಬ್ಬ ಮೆಡಿಕಲ್ ರೆಪ್ರೆಸೆಂಟೇಟಿವ್ ಮಾತ್ರವಾಗಿರುತ್ತಿದ್ದೆ. ಈಗ ತಾನು ಧನಿಕ. ಜೀವನಯಾಪನೆಗಾಗಿ ಕೆಲಸ ಮಾಡಬೇಕಾಗಿಯೂ ಇಲ್ಲ.

"ಅಯ್ಯೋ... ಅಯ್ಯೋ" ಕೆಲಸದಾಕೆ ಬೊಬ್ಬಿರಿದಳು. ಅವಳೀಗ ಜ್ಞಾನತಪ್ಪಿದ ಸ್ಥಿತಿಯಿಂದ ಎಚ್ಚರಗೊಂಡಿದ್ದಳು. ಯಾರು ಈ ಕ್ರೂರ ಕೃತ್ಯಗೈದದ್ದು? ಅವನು ಸಿಡಿಲು ಬಡಿದು ಸಾಯಲಿ.

ಯೋಚನೆಗಳಿಂದ ಎಚ್ಚರಗೊಂಡು ಮಿತ್ರ ಬಾಗಿ ನಿಂತು ತನ್ನ ಪತ್ನಿಯ ಶವವನ್ನು ಪರೀಕ್ಷಿಸಿದರು. ಕಣ್ಣುಗಳು ತೆರೆದುಕೊಂಡಿದ್ದವು. ಆದರೆ ಆ ಮುಖದಲ್ಲಿ ಗಾಬರಿಯ ಭಾವವೇನೂ ಇರಲಿಲ್ಲ. ಒಂದು ಕೈ ಈಗಲೂ ನೆಲದ ಮೇಲಿತ್ತು. ಔರಂಗಜೇಬನ ನಾಣ್ಯವಿಟ್ಟು ಬೆಳ್ಳಿಯಲ್ಲಿ ಕಟ್ಟಿದ ಆ ದೊಡ್ಡ ಉಂಗುರ ಆ ಕೈಯಲ್ಲಿ ಹೊಳೆಯುತ್ತಿತ್ತು.

"ನಾನು ರಮೇಶನನ್ನು ಕರೆಯುತ್ತೇನೆ" ಅವರು ಹೇಳಿದರು ಮಗನ ಕೋಣೆಯನ್ನು ಹೊಕ್ಕ ಕೂಡಲೇ ಅವರಿಗೆ ತಾನು ಮೊದಲು ಪೋಲೀಸಿಗೆ ತಿಳಿಸಬೇಕಾಗಿತ್ತೆನ್ನಿಸಿತು. ತಾನು ಕಾನೂನು ನಿಯಮಗಳನ್ನು ಪೂರ್ತಿಯಾಗಿ ಮರೆಯುತ್ತಿದ್ದೇನೆ.

"ರಮೇಶ, ಏಳು ಒಂದು ಅನಾಹುತ ಸಂಭವಿಸಿದೆ" ಆತನೆಂದ

ರಮೇಶ ಯಾವುದೇ ಕುತೂಹಲ ಪ್ರಕಟಿಸಲಿಲ್ಲ "ನಾನು ಡ್ರೆಸ್ ಮಾಡಿಕೊಂಡು ಬರುತ್ತೇನೆ. ಐದೇ ನಿಮಿಷದಲ್ಲಿ ಬಂದೆ" ರಮೇಶ ಹೇಳಿದ.

ಮಿತ್ರ ಪುನಃ ತನ್ನ ಹೆಂಡತಿಯ ಶವದ ಬಳಿ ಸಾರಿದ ಕೆಲಸದಾಕೆ ಈಗಲೂ ಎದೆ ಬಡಿದು ರೋಧಿಸುತ್ತಿದ್ದಳು. "ಸ್ವಲ್ಪ ಹೊತ್ತಿನ ಮಟ್ಟಿಗೆ ನಿನ್ನ ಅಳು ನಿಲ್ಲಿಸು" ಅವರು ಗುಡುಗಿದರು. "ಇನ್ನು ಪೋಲೀಸಿನವರು ಬಂದಾಗ ಅಳಬಹುದು."

ಅರ್ಧರಾತ್ರಿಯ ನಂತರ ತಾನೊಮ್ಮೆ ಎದ್ದಾಗ ಸ್ವಾಗತ ಕೋಣೆಯಿಂದ ಅವಳು ಮಾತನಾಡುತ್ತಿದ್ದುದನ್ನು ಕೇಳಿದಂತೆ ಅವರಿಗೆ ನೆನಪಾಯಿತು. ನಂತರ ಎಷ್ಟು ಹೊತ್ತಿಗೆ ಆ ಮಾತು ನಿಂತು ಹೋಯಿತು? ಎಷ್ಟು ಹೊತ್ತಿಗಾಗಿತ್ತು ಕೊನೆಯ ಅತಿಥಿಯೂ ಬೀಳ್ಕೊಂಡು ಹೋಗಿದ್ದು? ಕೊನೆಯ ಅತಿಥಿಯೇ ಕೊಲೆಪಾತಕಿಯಾಗಿರಬಹುದೆ? ಹೀಗೆ ಹಲವು ಪ್ರಶ್ನೆಗಳು ಅವರನ್ನು ಕಾಡುತ್ತಲೇ ಇದ್ದವು. ಆಕೆಯ ಕಿವಿಗಳಲ್ಲಿರುವ ವಜ್ರದ ಬೆಂಡೋಲೆಗಳನ್ನಾಗಲಿ ಕುತ್ತಿಗೆಯಲ್ಲಿರುವ ಸರಪಳಿಸರವನ್ನಾಗಲಿ ಕೊಲೆಪಾತಕಿ ಕೊಂಡು

ಹೋಗಿರಲಿಲ್ಲ. ಹಾಗಿರುವಾಗ ಆತ ಕಳ್ಳನಲ್ಲ ಖಂಡಿತ. ಮತ್ತೆ ಆಕೆಯನ್ನು ಕೊಂದು ಅವನಿಗೇನು ಸಿಕ್ಕಿತು? ಅವಳಿಗೆ ವೈರಿಗಳಿದ್ದರೆ? ಅವಳ ಹೆಸರಿನಲ್ಲಿ ಒಂದು ಸುಳ್ಳುಕೇಸು ಕೊಟ್ಟು ಒಂದು ವರ್ಷಕ್ಕಿಂತಲೂ ಹೆಚ್ಚು ಕಾಲ ಕಾಟಕೊಟ್ಟಿದ್ದ ಆ ಪತ್ರಿಕಾಸಂಪಾದಕನಾಗಿರಬಹುದೇ ಕೊಲೆಗಾರ? ಕೇಸು ಹಿಂತೆಗೆದುಕೊಂಡರೆ ತನ್ನ ಮಾನಹಾನಿಯಾಗುವುದೆಂದೆಣಿಸಿ ಅವಳನ್ನು ಕೊಂದದ್ದಾಗಿರಬಹುದೆ? ಅಥವಾ, ರಮೇಶನ ಹುಡುಗಿಯ ಅಣ್ಣಂದಿರ ಕೈವಾಡವಾಗಿರಬಹುದೆ? ಅವರು ನಿರುದ್ಯೋಗಿಗಳು. ನಡುವೆ ಏನಾದರೂ ಮಸಲತ್ತು ಮಾಡಿಯೋ ಯಾವುದಾದರೂ ಕಳ್ಳವ್ಯಾಪಾರದಲ್ಲಿ ಭಾಗಿಗಳಾಗಿಯೋ ನಾಲ್ಕು ಕಾಸು ಸಂಪಾದನೆ ಮಾಡುತ್ತಾರೆ. ಆಗ ಒಳ್ಳೆ ರೇಶಿಮೆ ಷರಟುಗಳನ್ನು ಧರಿಸಿಕೊಂಡು ಬೀದಿಯಲ್ಲಿ ಹಾಡು ಗುನುಗುತ್ತ ಹೋಗುತ್ತಾರೆ. ಅದು ಇಲ್ಲದಾಗ ಮಾತ್ರ ಕೊಳೆಯಾದ ಬಟ್ಟೆಗಳನ್ನು ಧರಿಸಿ ನಮ್ಮ ಮನೆಯ ಮುಂದೆ ಕುಳಿತು ದಾರಿಯಲ್ಲಿ ಹೋಗಿ ಬರುವವರನ್ನೆಲ್ಲ ಟೀಕಿಸುತ್ತಾರೆ. ಒಮ್ಮೆ ಅವರಲೊಬ್ಬ ಅನುಸೂಯಳಿಗೆ ಫೋನ್ ಮಾಡಿ ಹೇಳಿದ: 'ನನ್ನ ತಂಗಿಯ ಚಾರಿತ್ರ್ಯ ಹಾಳು ಮಾಡಿದ್ದು ರಮೇಶನೇ. ಅವನು ಈ ಕೂಡಲೇ ಅವಳನ್ನು ಮದುವೆಯಾಗಬೇಕು. ಅದ್ದಿ ಹೇಳುತ್ತಿರುವುದು ನೀವೇ ಎಂದು ನಮಗೆ ಗೊತ್ತಿದೆ. ಎಚ್ಚರಿಕೆ! ನಾನು ನಿಮ್ಮನ್ನು ಇರಿದು ಕೊಂದಾದರೂ ನನ್ನ ತಂಗಿಯ ಭವಿಷ್ಯವನ್ನು ಭದ್ರವಾಗಿಸುವೆ.....'

ಅವನಾಗಿರಬಹುದೇ ನಿಜವಾದ ಕೊಲೆಗಾರ?

"ಇದನ್ಯಾರು ಮಾಡಿದರು?" ರಮೇಶ ಕೇಳಿದ. ಅವನ ಮುಖದಲ್ಲಿ ಯಾವುದೇ ದುಃಖವಿರಲಿಲ್ಲ. ತುಟಿಯಲ್ಲೊಂದು ಮುಗುಳ್ನಗೆಯೂ ಅರಳುತ್ತಿದೆಯೇನೋ ಅನ್ನಿಸಿತು ಮಿತ್ರರಿಗೆ.

"ನನ್ನ ಹತ್ರ ಕೇಳಿ ಏನು ಪ್ರಯೋಜನ?" ಮಿತ್ರ ಕೇಳಿದರು. "ನಾನು ನಿದ್ರೆ ಮಾಡುತ್ತಿದ್ದೆ. ಏನೂ ಗೊತ್ತಾಗಲಿಲ್ಲ"

"ಅದನ್ನೆಲ್ಲ ನೀವು ಪೋಲೀಸರ ಹತ್ರ ಹೇಳಿಕೊಳ್ಳಿ" ರಮೇಶ ಹೇಳಿದ. ಆ ನಂತರ ಫೋನಿನಲ್ಲಿ ಪೋಲೀಸರಿಗೆ ಸುದ್ದಿ ತಿಳಿಸಿದ.

ಮಿತ್ರ ಗಾಬರಿಗೊಂಡು ಕಂಪಿಸಿದರು.

"ನಿನಗೆ ನನ್ನ ಮೇಲೆ ಸಂದೇಹವೇ?" ಅತ ಮಗನನ್ನು ಕೇಳಿದರು. "ನಾನಷ್ಟು ಕಲ್ಲು ಹೃದಯದವನೆಂದು ತಿಳಿದಿದ್ದೀಯಾ ನೀನು? ಅಲ್ಲದೆ ನಾನು ಅವಳನ್ನು ಯಾವಾಗಲೂ ಅತ್ಯಂತ ಹೆಚ್ಚು ಪ್ರೀತಿಸಿದವನೆಂದು ನಿನಗೆ ಗೊತ್ತಿಲ್ಲವೇ?"

"ಅಪ್ಪಾ, ನೀವು ದುಡ್ಡನ್ನೂ ಪ್ರೀತಿಸಿದವರು ತಾನೆ?" ರಮೇಶ ಹೇಳಿದ.

ನೆಟ್‌ಬನಿಯನ್ ಅಲ್ಲಲ್ಲಿ ಹರಿದು ಹೋಗಿತ್ತು. ಅವನ ರೋಮಭರಿತ ಹೊಟ್ಟೆಯನ್ನು ನೋಡುತ್ತ ರೋಡರಿಕ್ಸ್ ಗೊಣಗಿದ: "ಹಂದಿ!"

ಎರಡನೇ ಮಗ ಸಿರಿಲ್ ಅಡುಗೆಮನೆಯಿಂದ ಒಂದು ಮಗ್‌ನಲ್ಲಿ ಚಹ ತೆಗೆದುಕೊಂಡು ಹೊರಬಂದ - ಹಬೆಯಾಡುತ್ತಿರುವ ಚಹ. ಮುದುಕನ ಬಾಯಲ್ಲಿ ನೀರೂರಿತು.

"ಆ ಚಹ ನನಗೆ ಕೊಡು ಮಗಾ" ಆತ ಗೋಗರೆದ.

ಸಿರಿಲ್ ಗಹಗಹಿಸಿ ನಕ್ಕ. ಅಲ್ಲೇ ಚಿಟ್ಟೆಯ ಮೇಲೆ ಕುಳಿತು ಚಹ ಹೀರತೊಡಗಿದ.

ನಾನು ಅತ್ತಿಗೆಮ್ಮನ ಚಾಕರಿ ಮಾಡಿದ್ದಕ್ಕೆ ಸಿಕ್ಕಿದ ಬಿಸಿ ಚಹ ಇದು. ಆತ ಮುದುಕನಿಗೆ ಹೇಳಿದ. "ಇದನ್ನು ನಾನು ನಿನಗಲ್ಲ, ದೇವರೇ ಬಂದು ಕೇಳಿದರೂ ಕೊಡಲಾರೆ"

"ನನಗೆ ಚಹ ಕೊಡುವುದು ಯಾವಾಗ ಅಂತ ಮರಿಯಾ ಹತ್ತಿರ ಕೇಳಿ ಬಾ ಮಗಾ" ರೋಡರಿಕ್ಸ್ ಹೇಳಿದ. "ಚಹ ಕುಡಿದರೆ ನನ್ನ ಕೆಮ್ಮು ಸ್ವಲ್ಪ ಶಮನವಾಗಬಹುದು."

"ನಿನ್ನ ಕೆಮ್ಮು ಶಮನವಾದರೆ ಅತ್ತಿಗೆಮ್ಮನಿಗೆ ಏನು ಲಾಭ?" ಸಿರಿಲ್ ಕೇಳಿದ. ಮತ್ತೆ ಆ ಪ್ರಶ್ನೆಯ ಗೂಢಾರ್ಥವನ್ನು ಸವಿಯುತ್ತ ಆತ ಗಹಗಹಿಸಿ ನಕ್ಕ.

ಮುದುಕ ಗೋಡೆಯನ್ನು ಆಧರಿಸಿ ಹಿಡಿದುಕೊಂಡು ಮೆಲ್ಲನೆ ಅಡುಗೆಮನೆಗೆ ಹೋದ. ಅಲ್ಲಿ ಛಾವಣಿಯಿಂದ ತೂಗುತ್ತಿದ್ದ ಒಂದು ಬಲ್ಬು ಉರಿಯುತ್ತಿತ್ತು. ಮರಿಯಾ ಎರಡು ತಟ್ಟೆಗಳಲ್ಲಿ ಚಪಾತಿ ಮಾಡಿಟ್ಟಿದ್ದಳು. ಒಂದರಲ್ಲಿ ಬೆಣ್ಣೆ ಹಚ್ಚಿ ತೆಗೆದದ್ದು. ಇನ್ನೊಂದರಲ್ಲಿ ಒಣಚಪಾತಿಗಳು. ಮುದಕನನ್ನು ಕಂಡಕೂಡಲೆ ಮರಿಯ ತನ್ನ ಟವೆಲ್ ತೆಗೆದು ಒಳ್ಳೆಯ ಚಪಾತಿ ತಟ್ಟೆಯನ್ನು ಪೂರ್ತಿಯಾಗಿ ಮುಚ್ಚಿದಳು.

"ನೀವ್ಯಾಕೆ ಪಾಪ ಅಡುಗೆ ಮನೆಗೆ ಬರುವುದು?" ಅವಳು ಕೇಳಿದಳು. "ನಾನು ಅಲ್ಲಿಗೆ ತಂದುಕೊಡುವುದಿಲ್ಲವೇ ನಿಮಗೆ ಏನೂ ಬೇಕಿದ್ದರೂ?"

ಮುದುಕ ನೆಲದ ಮೇಲೆ ನೆಟ್ಟಗೆ ಕುಳಿತು ಮೆಲ್ಲನೆ ನಕ್ಕ: "ಏನಿದ್ದರೂ ನಾನು ಬಂದಿದ್ದಕ್ಕೆ ನನಗೆ ಸ್ವಲ್ಪ ಚಹ ಮತ್ತು ನಾಲ್ಕು ಬೆಣ್ಣೆ ಹಚ್ಚಿದ ಚಪಾತಿ ಕೊಡು. ಒಳ್ಳೆಯ ತಿಂಡಿ ತಿನ್ನಬೇಕು ಅಂತ ನಿನ್ನ ಗಂಡನಿಗೆ ಮಾತ್ರವಲ್ಲ, ನಮಗೂ ಆಸೆಯಿದೆ."

"ಅಯ್ಯೋ! ನೀವು ಮನಸ್ಸಿನಲ್ಲಿ ಏನೇನೋ ಇಟ್ಟುಕೊಂಡು ಮಾತನಾಡುತ್ತಿದ್ದೀರಿ!" ಮರಿಯಾ ಹೇಳಿದಳು. "ನಾನು ಯಾವ ಭೇದಭಾವವನ್ನೂ ಮಾಡುವುದಿಲ್ಲವಲ್ಲ?"

"ಶ್ರೀ ಮರಿಯಾ, ನೀನು ಒಂದು ವಿಚಾರ ಮರೆಯಕೂಡದು" ಮುದುಕ ಬೆರಳು ತೋರಿಸುತ್ತ ಹೇಳಿದ. ಇಲ್ಲಿ ಒಬ್ಬ ಒಬ್ಬರು ಮಾತ್ರ ಹಣ ಸಂಪಾದಿಸುತ್ತಿದ್ದಾರೆ. – ನನ್ನ ಮಗಳು ಲಿಜ್ಜಿ. ಅವಳು ಪ್ರತಿ ತಿಂಗಳು ಈ ಮನೆಗೆ ನೂರಾರೂ ರೂಪಾಯಿ ತರುತ್ತಿದ್ದಾಳೆ. ಅದರಲ್ಲಿ ಮುನ್ನೂರು ರೂಪಾಯಿ ನಿನಗೆ ಒಪ್ಪಿಸುತ್ತಿದ್ದಾಳೆ. ನಮ್ಮೆಲ್ಲರ ಊಟ-ತಿಂಡಿಗಾಗಿ.

"ಸಾಕು. ಸಾಕು. ನನಗೆಲ್ಲ ಗೊತ್ತು." ಮರಿಯಾ ಹೇಳಿದಳು. "ಇದನ್ನೆಲ್ಲ ನನಗೆ ನೆನಪಿಸುವುದು ಬೇಡ. ನಾನು ಏನನ್ನೂ ಕದ್ದು ತಿನ್ನುವವಳಲ್ಲ. ತೆಗೆದುಕೊಳ್ಳಿ. ನೀವೇ ಎಲ್ಲಾ ತಿಂದುಕೊಳ್ಳಿ."

ಅವಳು ಎರಡೂ ತಟ್ಟೆಗಳನ್ನು ತಂದು ಮುದುಕನ ಬಳಿ ಇಟ್ಟಳು ನಂತರ ಒಂದು ಗ್ಲಾಸಿನಲ್ಲಿ ಚಹವನ್ನೂ ಬಗ್ಗಿಸಿಕೊಟ್ಟಳು. ಮುದುಕ ಎಡ-ಬಲ ನೋಡದಂತೆ ಎಲ್ಲವನ್ನೂ ನುಂಗಿ ಮುಗಿಸಿದ. ತಟ್ಟೆಗಳು ಖಾಲಿಯಾದ ಕೂಡಲೇ ಎದ್ದು ಪುನಃ ಹಜಾರಕ್ಕೆ ಬಂದ.

ಮರಿಯಾ ಗೋಳೋ ಎಂದು ಅಳುತ್ತ ತನ್ನ ಗಂಡನ ಮಂಚದತ್ತ ನಡೆದಳು.

"ನನ್ನನ್ನು ಕೊಂದುಬಿಡಿ" ಅವಳೆಂದಳು. "ನನ್ನಿಂದಾಗದು ಹೀಗೆ ಬೈಗುಳ ತಿನ್ನುತ್ತ ಇಲ್ಲಿ ಒಬ್ಬ ಗುಲಾಮಳಂತೆ ಕಳೆಯಲು"

ಅವಳ ಗಂಡ ಕಣ್ಣು ಪಿಳುಕಿಸಿ ನೋಡಿದನಷ್ಟೆ. ಮಾತನಾಡಲಿಲ್ಲ. ಒಟ್ಟಾರೆ ಬದುಕು ಸಾಕಾಗಿದೆಯೆಂಬ ಮುಖಭಾವ ಅವನದಾಗಿತ್ತು.

ಮರಿಯಾ ಗಟ್ಟಿಯಾಗಿ ಬಿಕ್ಕಿದಳು.

"ಯಾಕೆ ಅಳುತ್ತಿದ್ದೀರಿ ಅತ್ತಿಗೆ?" ಲೀಸಾ ಕೇಳಿದಳು. ಸ್ನಾನ ಮುಗಿಸಿ ಕೂದಲೊರಸಿ ಕೊಳ್ಳುತ್ತ ಕೋಣೆಯೊಳಗೆ ಬಂದಿದ್ದಳು. ಕಪ್ಪಾಗಿದ್ದರೂ ಸುಂದರ ಅಂಗಸೌಷ್ಠವ ಅವಳದಾಗಿತ್ತು.

"ಅಪ್ಪ, ಅಡುಗೆ ಮನೆಯಲ್ಲಿ ಮಾಡಿಟ್ಟಿದ್ದ ಎಲ್ಲ ತಿಂಡಿಯನ್ನೂ ತಿಂದು ಮುಗಿಸಿದರು" ಮರಿಯಾ ಹೇಳಿದಳು. "ಇನ್ನು ನಾನು ನಿನಗೇನು ಕೊಡಲಿ, ಲೀಸಾ? ಈ ಉಂಡಾಡಿಗುಂಡನಿಗೇನು ಕೊಡಲಿ?"

ಅವಳ ಮಾತು ಕೇಳಿ ಸಿರಿಲ್ ಕೋಣೆಯೊಳಗೆ ಬಂದ. "ಅಪ್ಪ ನಮ್ಮನ್ನೆಲ್ಲ ಉಪವಾಸ ಕೆಡವಿದನೆ?" ಆತ ಕೇಳಿದ.

"ನೋಡಲಿಕ್ಕೆ ಅಸ್ಥಿಪಂಜರದ ಹಾಗಿದ್ದಾರೆ. ಆದರೆ ಈ ಇಡೀ ಲೋಕವನ್ನೇ ತಟ್ಟೆಯಲ್ಲಿಟ್ಟುಕೊಟ್ಟರೂ ತಿಂದು ಹಾಕುತ್ತಾನೆ ಈ ಮುದುಕ" ಸಿರಿಲ್ ಹೇಳಿದ.

ಮುದುಕನಿಗೆ ಅದು ಕೇಳಿಸಿತು. ಅವನಿಗೆ ಅಸಾಧ್ಯ ಸಿಟ್ಟು ಬಂತು.

"ನನಗೆ ಅಂತ ಅವಳು ಕೊಟ್ಟಿದ್ದನ್ನು ಮಾತ್ರ ನಾನು ತಿಂದದ್ದು. ಕದ್ದು ತಿಂದು ನನಗೆ ರೂಢಿ ಇಲ್ಲ." ಆತ ಹೇಳಿದ.

"ಈ ದಾರಿದ್ರ್ಯದಿಂದ ನಮಗೆ ಬಿಡುಗಡೆ ಇಲ್ಲವೇ ಲೀಸಾ?" ಸಿರಿಲ್ ಕೇಳಿದ. "ನಿನ್ನ ಮದುವೆ ಯಾವಾಗ?" ಅಗತ್ಯ ಬಂದರೆ ನಿನಗಾಗಿ ಒಂದು ಕೊಲೆ ಮಾಡಲಿಕ್ಕೂ ನಾನು ಸಿದ್ಧ.

ಸಿರಿಲ್ ನಕ್ಕ.

"ನಗುತ್ತೀಯಾ" ಲೀಸ ಹೇಳಿದಳು. ನಿನ್ನ ಈ ರೀತಿಯ ಮಾತುಗಳೇ ನನ್ನ ಸ್ಥಿತಿಯನ್ನು ಇನ್ನಷ್ಟು ಹಾಳು ಮಾಡಿರುವುದು. ಈಗ ರಮೇಶನ ಚಿಕ್ಕಮ್ಮ ಹೇಳುತ್ತಿದ್ದಾರೆ ಈ ಮದುವೆ ನಡೆಯುವುದು ಸಾಧ್ಯವೇ ಇಲ್ಲಾಂತ. ಅವರು ಸುಸಂಸ್ಕೃತರು. ಶ್ರೀಮಂತರು. ಅವರ ಹತ್ತಿರ ಸ್ವಲ್ಪ ಸಭ್ಯತೆಯಿಂದ ವರ್ತಿಸಿದರಾಗುವುದಿಲ್ಲವೇ ನೀನು?"

"ಹೋಗೇ. ನಿನ್ನ ಸಂಸ್ಕೃತಿ– ಸಭ್ಯತೆ ನೀನೇ ಇಟ್ಟುಕೋ" ಸಿರಿಲ್ ಹೇಳಿದ. "ನಿನ್ನನ್ನು ಮದುವೆಯಾಗಲು ಯಾವ ಕ್ಯಾಥೋಲಿಕನೂ ಮುಂದೆ ಬರುವುದಿಲ್ಲ ನೋಡ್ತಾ ಇರು. ಅಷ್ಟರಮಟ್ಟಿಗೆ ನಿನ್ನ ಹೆಸರು ಹಾಳಾಗಿ ಹೋಗಿದೆ. ಆದರೆ ನೀನು ನಿನ್ನದೆಲ್ಲವನ್ನು ಅರ್ಪಿಸಿದ ಆ ಹಿಂದು ಏನು ಮಾಡಿದ? ಅವನಿಗೆ ನಿನ್ನನ್ನು ಮದುವೆ ಮಾಡಿಕೊಳ್ಳುವ ಉದ್ದೇಶವೂ ಇಲ್ಲ. ನೀನು ನಿನ್ನ ಬಾಳು ಹಾಳುಮಾಡಿಕೊಂಡೆ ಲೀಸಾ."

"ಈ ವಿಚಾರದ ಬಗ್ಗೆ ಇನ್ನು ನನ್ನ ಹತ್ತಿರ ಮಾತನಾಡುವುದು ಬೇಡ" ಲೀಸಾ ಹೇಳಿದಳು. ನನ್ನ ಬದುಕು ನನ್ನದು. ಮದುವೆಯಾಗದಿದ್ದರೆ ಬೇಡ. ಹೀಗೆ ಆಗಾಗ ಭೇಟಿಯಾಗುತ್ತಿದ್ದರೆ ನನಗೆ ಸಾಕು."

ಪೋಲೀಸು ವ್ಯಾನ್ ಬಂದಾಗ ಜಗಲಿ ಮೇಲೆ ಕುಳಿತಿದ್ದ ಮುದುಕ ದಿಗ್ಭ್ರಮೆಗೊಂಡು ಎದ್ದು ನಿಂತ. ಉಳಿದವರೂ ಗಾಬರಿಯಾದರು.

"ಪೋಲೀಸರೇ?" ಸಿರಿಲ್ ಕೇಳಿದ. "ನಾವು ಕಳ್ಳಭಟ್ಟಿ ನಿಲ್ಲಿಸಿ ವರ್ಷ ಆಯಿತಲ್ಲ?"

"ಕಳ್ಳಭಟ್ಟಿಯ ವಿಚಾರಣೆಗಲ್ಲ ನಾವು ಬಂದಿದ್ದು" ಇನ್‌ಸ್ಪೆಕ್ಟರ ರಾಮಚಂದ್ರ ಹೇಳಿದರು. "ನಗರದಲ್ಲಿ ನಿಮಗೆ ಗೊತ್ತಿರುವ ಒಂದು ಮನೆಯಲ್ಲಿ ಕೊಲೆಯಾಗಿದೆ. ಆ ಬಗ್ಗೆ ಮಾಹಿತಿ ಸಂಗ್ರಹಕ್ಕಾಗಿ ಹೊರಟಿದ್ದೇವೆ."

"ಯಾರು ಕೊಲೆಯಾದವನು?" ಸಿರಿಲ್ ಕೇಳಿದ.

'ಅನಸೂಯದೇವಿ ಎಂಬ ಕವಯಿತ್ರಿ' ಇನ್ಸ್‌ಪೆಕ್ಟರ್ ಹೇಳಿದರು.

ಇನ್ಸ್‌ಪೆಕ್ಟರ್ ರಾಮಚಂದ್ರ ಅವರಿಗೆ ಅವತ್ತು ರಾತ್ರಿ ನಿದ್ರೆ ಬರಲಿಲ್ಲ. ಅವರು ತಮ್ಮ

ಮೇಜಿನ ಮೇಲೆ ಅನಸೂಯಾದೇವಿಯ ಫೋಟೋವನ್ನು ಪುಸ್ತಕಕ್ಕೊರಗಿಸಿಟ್ಟಿದ್ದರು. ಮುಗುಳ್ನಗುವ ತುಟಿಗಳು. ಆದರೆ ಅಳುವ ಕಣ್ಣುಗಳು. ಬಿಸಿಲೂ ಮಳೆಯೂ ಒಂದಾದ ಒಂದು ದಿವಸದಂತಿದ್ದಳು. ಆ ಕವಯಿತ್ರಿ ತಾನೊಬ್ಬ ಶಾಲಾವಿದ್ಯಾರ್ಥಿಯಾಗಿದ್ದಾಗಲೇ ಆಕೆಯನ್ನು ಆರಾಧಿಸಿದ್ದೆ. ಆಕೆಯ ಪ್ರೀತಿಯ ಭಾರವನ್ನು ಹೊತ್ತ ದ್ವಿಪದಿಗಳನ್ನು ತಾನು ಏಕಾಂತದಲ್ಲಿ ಹಾಡುತ್ತಿದ್ದೆ. ಆಕೆಯನ್ನು ಕೊಲ್ಲಲು. ಮೃದುವಾದ ಆ ಶರೀರವನ್ನು ಕಠಾರಿಯಿಂದ ಇರಿಯಲು ಮನಸ್ಸಾದರೂ ಬಂದಿದ್ದು ಯಾರಿಗೆ? ಆಕೆಗೆ ವೈರಿಗಳೇ ಇರಲಿಲ್ಲವೆಂದು ತನ್ನಲ್ಲಿ ಹೇಳಿದ ಆಕೆಯ ಗಂಡನೂ ಕೂಡಾ ವಾಸ್ತವದಲ್ಲಿ ಆಕೆಯ ವೈರಿಯಾಗಿದ್ದ. ವಿಚಾರಣೆಯ ಮೂಲಕ ತಾನು ಹಲವಾರು ವಿಷಯಗಳನ್ನು ಅರ್ಥಮಾಡಿಕೊಂಡಿದ್ದೆ. ಅನಸೂಯಾದೇವಿ ಮದುವೆಯಾಗಿ ತನ್ನ ಮನೆಯ ರಾಜನನ್ನಾಗಿ ಮಾಡಿದ ಮಿಸ್ಟರ್ ಮಿತ್ರ ಸ್ತ್ರೀಲೋಲನಾಗಿದ್ದ. ಕೆಲಸದ ಹೆಂಗಸರೂ ತರಕಾರಿ ಮೊದಲಾದ ವ್ಯಾಪಾರಕ್ಕಾಗಿ ಬರುವ ಹೆಂಗಸರೂ ಆತನ ಕಾಮಕ್ಕೆ ಬಲಿಯಾಗಿದ್ದರು. ಅನಸೂಯಾದೇವಿ ಸತ್ತರೆ ಆಕೆಯ ಎಲ್ಲ ಸಂಪತ್ತಿಗೆ ಮಿತ್ರ ಹಕ್ಕುದಾರರಾಗುತ್ತಾರೆ. ಆಕೆಯ ಮರಣದಿಂದ ಆತನಿಗೆ ಖಂಡಿತವಾಗಿಯೂ ಲಾಭವಿದೆ. ಆದರೆ ಕೊಲೆಯ ಕೆಲಸ ಆತನಿಂದಾಗಬಹುದೆಂದು ತನಗನ್ನಿಸುವುದಿಲ್ಲ. ಕಠಿಣವಾದ ಯಾವ ಭಾವನೆಗೂ ಆ ಸಣ್ಣ ತಲೆಯೊಳಗೆ ಸ್ಥಾನವಿರಲಾರದು.

ಹಾಗಾದರೆ ವೈರಿ ಯಾರು? ರೋಡೆರಿಕ್ಸ್‌ನ ಗಂಡುಮಕ್ಕಳೇ? ಮದ್ಯಕುಡಿದು ಬೋಧಕಳೆದುಕೊಂಡು ರಸ್ತೆಬದಿಯಲ್ಲೋ ಪಾರ್ಕಿನಲ್ಲೋ ಬಿದ್ದುಮಲಗುವ ಆ ಸೋಮಾರಿಗಳೇ? ಕೊಲೆ ಮಾಡುವ ಜಾಣತನ ಅವರಲ್ಲಿರಲು ಸಾಧ್ಯವೇ ಇಲ್ಲ. ಕೊಲ್ಲುವ ಒಂದು ಪ್ಲಾನ್ ಮನಸ್ಸಿನಲ್ಲಿ ಹಾಕಿಕೊಳ್ಳುವ ತಾಳ್ಮೆಯೂ ಅವರಿಗಿಲ್ಲ.

ಅನಸೂಯಾದೇವಿಯ ಹೆಸರಿನಲ್ಲಿ ಒಂದು ಸುಳ್ಳು ಕಾಪಿರೈಟ್ ಕೇಸು ಕೊಟ್ಟು ಆಕೆಗೆ ಸುಮ್ಮನೆ ತೊಂದರೆಕೊಟ್ಟ ಸಂಪಾದಕ. ಕೇಸು ಹಿಂತೆಗೆದುಕೊಳ್ಳಲು ಆತ ಭಯಪಟ್ಟನೆಂಬುದನ್ನು ಕೇಳಿದೆ. ಆತನಿಗದು ಅಪಮಾನಕವಾಗದೆ? ಎಲ್ಲ ಸಾಹಿತಿಗಳೂ ರಾಜಕಾರಣಿಗಳೂ ಅನಸೂಯಾದೇವಿಯ ಪಕ್ಷದಲ್ಲಿದ್ದರು. ಹಲವೆಡೆ ಸಭೆಗಳೂ ಚರ್ಚೆಗಳೂ ನಡೆದವು. ಅನಸೂಯಾದೇವಿಯನ್ನು ಈ ಲೋಕದಿಂದ ಒದ್ದೋಡಿಸಿದರೆ ಮಾತ್ರ ತಾನು ನಾಲ್ಕು ಮಂದಿಯ ಮುಂದೆ ತಲೆಯೆತ್ತಿ ಓಡಾಡಬಹುದೆಂದು ಆತನಿಗನ್ನಿಸಿರಬೇಕು. ಆದ್ದರಿಂದ ಆತ ಹಣ ಕೊಟ್ಟು ಕೊಲ್ಲಿಸಿರಬಹುದು.

ಅಲ್ಲದಿದ್ದರೆ ಅನಸೂಯಾದೇವಿಯ ಕಸದ ಬುಟ್ಟಿಯಲ್ಲಿದ್ದ ಪತ್ರ ಬರೆದ ಮಾಧವನ್ ಪಿಳ್ಳೆಯಾಗಿರಬಹುದೇ ಕೊಲೆಗಾರ? "ಭೇಟಿಯಾಗಲು ಒಪ್ಪದಿದ್ದರೆ ನಾನು ಹಿಂದಿನ ರಹಸ್ಯವನ್ನು ಪ್ರಕಟಿಸಿ ಬಿಡುವೆ. ಆ ಪತ್ರ ನನ್ನ ಹತ್ತಿರ ಇದೆಯೆಂಬುದನ್ನು ಜ್ಞಾಪಕದಲ್ಲಿಟ್ಟುಕೋ" ಇವು ಪತ್ರದ ಸಾಲುಗಳು. ಆ ವಿಳಾಸವನ್ನು ಹುಡುಕುತ್ತ

ಇನ್ಸ್‌ಪೆಕ್ಟರ್ ಕಾಂಡಿವಿಲ್ಲಿಯ ಒಂದು ಹಳದಿ ಬಣ್ಣದ ಕಟ್ಟಡಕ್ಕೆ ತಲುಪಿದರು. ಸಾಲುಸಾಲಾಗಿದ್ದ ಕೋಣೆಗಳಲ್ಲಿ ಹಲವು ಸಂಸಾರಗಳು ವಾಸಮಾಡುತ್ತಿವೆ.

"ಮಾಧವನ್‌ಪಿಳ್ಳೆ ಅಂದರೆ ನೀವೇ ತಾನೆ?" ಇನ್ಸ್‌ಪೆಕ್ಟರ್ ಕೇಳಿದರು.

ಮೂರನೇ ನಂಬರಿನ ಕೋಣೆಯಲ್ಲಿ ಮಂಚದಲ್ಲಿ ಮಲಗಿ ಓದುತ್ತಿದ್ದ ಮುದುಕ ತಿರುಗಿ ನೋಡಿದ.

ಜೋರು ಮಾಡಿ ಕೇಳಿದಾಗ ಪಿಳ್ಳೆ ಗುಟ್ಟು ಬಿಟ್ಟು ಕೊಟ್ಟ. ತಾನು ಇಪ್ಪತ್ತೈದು ವರ್ಷಗಳ ಹಿಂದೆ ಬಾಂಬೆಯಲ್ಲಿ ಕೆಲಸ ಮಾಡುತ್ತಿದ್ದೆ. ರೇಷನ್‌ಕಾರ್ಡ್ ಬಗ್ಗೆ ವಿಚಾರಿಸುತ್ತ ಹಲವಾರು ಮನೆಗಳನ್ನು ಹೊಕ್ಕುಹೊರಡುತ್ತಿದ್ದ ಕಾಲವದು. ತಾನು ಅದರ ಇನ್‌ಸ್ಪೆಕ್ಟರಾಗಿದ್ದೆ. ಒಂದು ಮಧ್ಯಾಹ್ನ ತಾನು ಚರ್ಚ್‌ಗೇಟಿನ ಒಂದು ಶ್ರೀಮಂತ ಕುಟುಂಬದ ಮನೆಯನ್ನು ಪ್ರವೇಶಿಸಿದೆ. ಅಲ್ಲಿ ಹದಿನೈದು ವಯಸ್ಸಿನ ಒಬ್ಬಳು ತರುಣಿ ಮಾತ್ರ ಇದ್ದಳು. "ಈಗ ಇಲ್ಲಿ ಬೇರಾರೂ ಇಲ್ಲ. ಇನ್ಯಾವಾಗಲಾದರೂ ಬಂದರೆ ಕಾರ್ಡ್‌ತೋರಿಸಬಹುದು." ಅವಳು ಹೇಳಿದಳು. ಯಾವುದೋ ಆವೇಶಕ್ಕೆ ಒಳಗಾಗಿ ತಾನು ಹಿಂದೆ ಮುಂದೆ ನೋಡದೆ ಬಾಗಿಲು ಹಾಕಿ ಆ ಹುಡುಗಿಯನ್ನು ಗಾಢವಾಗಿ ತಬ್ಬಿಕೊಂಡೆ. ಅವಳಿಗೆ ಚೀರಿಕೊಳ್ಳಲೂ ಧೈರ್ಯವಾಗಲಿಲ್ಲ. ಕೊನೆಗೆ ತಾನು ಅವಳನ್ನು ಬಿಟ್ಟು ಹೊರಡುವಾಗ ಅವಳು ಜಮಖಾನದ ಮೇಲೆ ಅಂಗಾತ ಮಲಗಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು.

ಬಾಗಿಲು ಹಾಕುವಾಗ ಅವಳು ಕೇಳಿದಳು "ನೀವು ಯಾರು?" ನನ್ನ ಹೆಸರು ಮಾಧವನ್ ಪಿಳ್ಳೆ ಅಂತ. ಯಾಕೆ, ಪೋಲೀಸಿನವರಿಗೆ ತಿಳಿಸಲಿಕ್ಕೋ?" ತಾನು ಕೇಳಿದೆ. ಏನನ್ನು ಎದುರಿಸುವ ಶಕ್ತಿ ಆಗ ತನ್ನಲ್ಲಿತ್ತು. ಆ ಹುಡುಗಿ ಎದ್ದು ಬಂದು ತನ್ನನ್ನು ಚುಂಬಿಸಿದಳು. "ಇಲ್ಲ, ನಾನು ಯಾರಿಗೂ ಹೇಳುವುದಿಲ್ಲ." ಅವಳೆಂದಳು. ಸುಮಾರು ನಾಲ್ಕು ತಿಂಗಳು ಕಳೆಯುಷ್ಟರಲ್ಲಿ ತನಗೊಂದು ಪತ್ರ ಬಂತು. ಅವಳದ್ದೇ ಅವಳ ಹೆಸರು ಅನಸೂಯಾದೇವಿಯೆಂದು ತನಗೆ ಗೊತ್ತಾಗಿದ್ದು ಆಗಲೇ. ಅವಳು ಬಂಗಾಳಿಯೆಂದೂ ಅಪ್ಪ-ಅಮ್ಮರ ಏಕಮಾತ್ರ ಪುತ್ರಿಯೆಂದೂ ತಾನು ಎಣಿಸಿರಲಿಲ್ಲ.

"ನನ್ನನ್ನು ನೀವು ಮದುವೆಯಾಗಬೇಕು. ನಾನೀಗ ಗರ್ಭಿಣಿ. ನೀವು ತಾನೇ ಇದಕ್ಕೆ ಜವಾಬ್ದಾರರು? ಕೂಡಲೇ ನನ್ನನ್ನು ಕಾಣಲು ಬನ್ನಿ. ಅನಸೂಯ."

ಪತ್ರ ಸಿಕ್ಕಿದ ಕೂಡಲೇ ಅಲ್ಲಿಗೆ ಹೋಗಬಹುದಿತ್ತು. ಅವಳನ್ನು ಮದುವೆಯಾಗಬಹುದಿತ್ತು. ಆದರೆ ಅವಳ ತಂದೆತಾಯಿಗಳಿಗೆ ಹೆದರಿ ತಾನು ಕೂಡಲೇ ನಗರವನ್ನು ಬಿಟ್ಟು ತನ್ನ ಹುಟ್ಟೂರಿಗೆ ಹೋದೆ. ಅಲೆದಾಡಿದೆ. ಉಪವಾಸ ಮಲಗಿದೆ. ರೋಗಿಯಾದೆ. ಮುದುಕನಾದೆ. ಅನಾಥನಾದೆ. ಅಂಥ ಸ್ಥಿತಿಯಲ್ಲಿದ್ದಾಗ ತನ್ನ

ನಾಲಿಗೆಯಲ್ಲಿ ಒಂದು ಹುಣ್ಣು ಕಾಣಿಸಿಕೊಂಡಿದ್ದು ಅದು ಕ್ಯಾನ್ಸರ್ ಆಗಿರುವ ಸಾಧ್ಯತೆಯಿದೆಯೆಂದು ತಿಳಿದ ಡಾಕ್ಟರ್ ಹೇಳಿದರು. ಕೂಡಲೇ ಬಾಂಬೆಗೆ ಹೋಗಿ ಅಂತ. ಟಾಟಾ ಮೆಮೋರಿಯಲ್ ಆಸ್ಪತ್ರೆಗೆ ಹೋದರೆ ಬಹುಶಃ ತಾನು ಗುಣಹೊಂದಬಹುದು. ತನ್ನ ತಂಗಿಯ ಮಗ ಈಗ ಬಾಂಬೆಯಲ್ಲಿ ಒಂದು ಪ್ರೈವೆಟ್ ಕಂಪನಿಯಲ್ಲಿ ಕೆಲಸದಲ್ಲಿದ್ದಾನೆ. ಅವನಿಗೆ ಪತ್ರ ಬರೆದು ಹಣ ತರಿಸಿದೆ. ಹಾಗೆ ಇಲ್ಲಿಗೆ ಬಂದೆ.

ಮಾಧವನ್ ಪಿಳ್ಳೆ ಹೇಳಿದ "ಈಗ ಇಲ್ಲಿ ಅನಸೂಯಾದೇವಿ ಮೇಲ್ಪಟ್ಟದ ಜೀವನ ನಡೆಸುವ ಬಹಳ ದೊಡ್ಡ ವ್ಯಕ್ತಿಯಾಗಿದ್ದಾಳೆ ಎಂದು ತಿಳಿಯಿತು. ಒಮ್ಮೆ ಆಕೆಯನ್ನು ಭೇಟಿಯಾಗಬೇಕೆಂದೆನ್ನಿಸಿತು. ಅದರಿಂದ ನನಗೇನೂ ನಷ್ಟವಿಲ್ಲ? ಏನಾದರೂ ಸಿಕ್ಕಿದರೆ ಲಾಭವೂ...."

"ಆಕೆಯ ಪತ್ರ ನಿಮ್ಮ ಬಳಿ ಇದೆಯೆ?" ಇನ್ಸ್‌ಪೆಕ್ಟರ್ ಕೇಳಿದರು.

ಮಾಧವನ್ ಪಿಳ್ಳೆ ತಲೆಯಾಡಿಸಿದ. "ನನ್ನ ಜೀವನದಲ್ಲಿ ನಾನು ಮಾಡಿದ ಸಂಪಾದನೆ ಎಂದರೆ ಅದೊಂದೇ. ಆತ ನಗುತ್ತ ಹೇಳಿದ. ನಾನು ಆಕೆಗೆ ಪತ್ರ ಬರೆದದ್ದು ಒಂದು ಅಪರಾಧವಾದರೆ ನೀವು ನನ್ನನ್ನು ಶಿಕ್ಷಿಸಿ. ನಾನು ಜೈಲಲ್ಲಿರಬಹುದಲ್ಲ? ಸ್ವಲ್ಪ ಕಾಲ ಸರಕಾರದ ಖರ್ಚಿನಲ್ಲಿ! ಆಕೆ ನಿಮ್ಮನ್ನು ಕಳಿಸಿದರೇ ನನ್ನನ್ನು ಅರೆಸ್ಟ್ ಮಾಡಲು? ಕ್ಯಾನ್ಸರ್ ಹಿಡಿದ ಈ ಮುದುಕನನ್ನು?"

"ಅನಸೂಯಾದೇವಿ ನನ್ನನ್ನು ಕಳಿಸಿಲ್ಲ. ಕಳಿಸುವುದೂ ಇಲ್ಲ" ಇನ್ಸ್‌ಪೆಕ್ಟರ್ ಹೇಳಿದರು. "ಆಕೆ ಸತ್ತು ಹೋಗಿದ್ದಾರೆ. ನಿನ್ನೆ ರಾತ್ರಿ ಅವರನ್ನು ಯಾರೋ ಇರಿದು ಕೊಂದಿದ್ದಾರೆ ಅವರು ಯಾರೆಂದು ಪತ್ತೆ ಹಚ್ಚಲು ನಾನು ಹೊರಟಿದ್ದೇನೆ."

"ನಾನಲ್ಲ ಮಾಧವನ್ ಪಿಳ್ಳೆ ಹೇಳಿದ. "ನಾನೆಂದೂ ಆಕೆಯನ್ನು ಕೊಲ್ಲಲಾರೆ. ನಾನೊಬ್ಬ ಆರಾಧಕನಾಗಿರುವುದು. ಆದರೆ ಕೊಲೆಗಾರನಲ್ಲ."

"ಅದು ನನಗೂ ಗೊತ್ತಿದೆ." ಇನ್ಸ್‌ಪೆಕ್ಟರ್ ಹೇಳಿದರು. "ನಿಮ್ಮ ಅಳಿಯ ನಿನ್ನೆ ರಾತ್ರಿ ಎಲ್ಲಿದ್ದ?"

"ಅವನಿಲ್ಲಿ ಮಲಗಿ ನಿದ್ದೆ ಮಾಡುತ್ತಿದ್ದ. ಪಿಳ್ಳೆ ಹೇಳಿದ" ಅವನಿಗೆ ಆಕೆಯ ವಿಚಾರವೇ ಗೊತ್ತಿಲ್ಲ. ಅವನ ಮೇಲೆ ಸಂದೇಹ ಪಡಬೇಡಿ. ಅವನು ನಿರಪರಾಧಿ. ಅವನ ಜತೆಗಿರಲು ನಾನು ಬಂದುದರಿಂದ ಅವನಿಗೆ ತೊಂದರೆಯುಂಟಾಯಿತು. ನಾನು ಕೇರಳದಲ್ಲೇ ಇದ್ದು ಸಾಯಬಹುದಿತ್ತು.

ಇನ್ಸ್‌ಪೆಕ್ಟರ್ ಎದ್ದರು. "ನಾನು ಹೋಗಿಬರುತ್ತೇನೆ" ಅವರೆಂದರು. "ಇನ್ನೊಮ್ಮೆ ಭೇಟಿಯಾಗೋಣ"

ಗರ್ಲ್ಸ್ ಕಾಲೇಜಿನಲ್ಲಿ ಇಂಗ್ಲೀಷ್ ಲೆಕ್ಚರರಾಗಿದ್ದ ಸುರೇಂದ್ರಮೇತ್ತರಿಗಾಗಿ ಕಾಯುತ್ತ ಅವರ ಕೋಣೆಯ ಹೊರಗಿನ ವೆರಾಂಡದಲ್ಲಿ ಇನ್ಸ್‌ಪೆಕ್ಟರ್ ರಾಮಚಂದ್ರನ್ ಕುಳಿತಿದ್ದರು. ಒಬ್ಬಾಕೆ ಹೆಣ್ಣು ಮಗಳು ಅವರ ಹತ್ತಿರ ಬಂದು ನಿಂತು ಹೇಳಿದಳು. ನನಗೆ ಆ ಕೊಲೆ ಕೇಸಿನ ಬಗ್ಗೆ ಹಲವು ಮಾಹಿತಿಗಳು ಸಿಕ್ಕಿವೆ.

ಇನ್ಸ್‌ಪೆಕ್ಟರ್ ಏನೂ ಹೇಳಲಿಲ್ಲ. ಅವಳನ್ನು ನೋಡಿದ ತಕ್ಷಣವೇ ಅವಳೊಬ್ಬ ಹಿಸ್ಟೀರಿಯಾ ಪೀಡಿತೆಯೆಂದು ಯಾರಿಗೂ ಅರ್ಥವಾಗುವಂತಿದ್ದಳು. ತೆಳ್ಳಗೆ ನೀರಿಳಿದ ಶರೀರ ಜ್ವಲಿಸುವ ಕಣ್ಣುಗಳು.

"ನಾನು ಮೇರಿ" ಅವಳು ಹೇಳಿದಳು. ನಾನು ಸುರೇಂದ್ರಮೇತ್ತರ ಶಿಷ್ಯೆ ಅವರ ರಹಸ್ಯಗಳೆಲ್ಲವೂ ನನಗೆ ಗೊತ್ತು.

"ನಾನು ಮೇತ್ತರ ಬಳಿ ಮಾತನಾಡಲೆಂದು ಬಂದಿದ್ದೇನೆ. ಶಿಷ್ಯೆಯ ಬಳಿ ಅಲ್ಲ. ಇನ್ಸ್‌ಪೆಕ್ಟರ್ ಹೇಳಿದರು"

"ಅವರು ಊಟ ಮಾಡಿ ಬರಲಿ. ಅಷ್ಟರ ತನಕ ನನ್ನ ಹತ್ತಿರ ಪ್ರಶ್ನೆ ಕೇಳಿ" ಅವಳೆಂದಳು.

ಸುರೇಂದ್ರಮೇತ್ತರು ಅನಸೂಯಾದೇವಿಯ ಅಭಿಮಾನಿಯೆಂದು ಮೇರಿ ಹೇಳಿದಳು. ಅವರು ಆಕೆಗೆ ಪ್ರೇಮಪತ್ರಗಳನ್ನು ಬರೆಯುತ್ತಿದ್ದುದು ಮಾತ್ರವಲ್ಲ, ಆಕೆಯನ್ನು ಭೇಟಿಯಾಗಲೂ ಹೋಗುತ್ತಿದ್ದರು. ಕೊಲೆ ನಡೆದ ರಾತ್ರಿ ಅವರು ಆಕೆಯ ಮನೆಯಲ್ಲಿ ನಡೆದ ಸತ್ಕಾರ ಕೂಟದಲ್ಲಿ ಭಾಗವಹಿಸಲೆಂದು ಡ್ರೆಸ್ ಮಾಡಿಕೊಂಡು ಹೋಗಿದ್ದರು. ಅವರು ಟ್ಯಾಕ್ಸಿ ಹಿಡಿಯುವುದನ್ನು ನೋಡಿದ ಮೇರಿ ಯಾವ ಕಡೆ ಹೋಗುತ್ತಿದ್ದೀರೆಂದು ಅವರನ್ನು ಕೇಳಿದ್ದಳು. ಅನಸೂಯಾದೇವಿಯ ಮನೆಯ ಸತ್ಕಾರಕೂಟಕ್ಕೆ ಹೋಗುತ್ತಿದ್ದೇನೆಂದು ಅವರು ಹೇಳಿದ್ದರು.

ಅವರ ವೇಷ ವಿಚಿತ್ರವಾಗಿತ್ತು. ಕಪ್ಪುಸೂಟು, ಕಪ್ಪು ಷರಟು, ಕಪ್ಪು ಕರ್ಚೀಫು ಯಾರದೋ ಸಾವಿನ ಶೋಕಾಚರಣೆಗಾಗಿ ಹೋಗುತ್ತಿರುವಂತಿದೆ ಎಂದು ಆಕೆ ಹೇಳಿದ್ದಳು ಕೂಡ. ಆಗ ಸುರೇಂದ್ರಮೇತ್ರ ಏನೂ ಹೇಳಿರಲಿಲ್ಲ. ತನಗೆ ಅನಸೂಯಾದೇವಿಯ ಬಗ್ಗೆ ಭರ್ಜರಿ ಅಸೂಯೆ ಇದೆಯೆಂಬುದು ಅವರ ಎಣಿಕೆಯಾಗಿತ್ತು. ತನಗೇಕೆ ಆ ಮಧ್ಯ ವಯಸ್ಕಳ ಬಗ್ಗೆ ಅಸೂಯೆ? ಅನಸೂಯಾದೇವಿಯ ಬಗ್ಗೆ ಕೇಳಬಾರದಂತಹ ಹಲವು ಕಥೆಗಳು ನಗರದ ತುಂಬ ಪ್ರಚಾರದಲ್ಲಿದ್ದವು. ಅವರ ಖಾಸಗಿ ಬದುಕು ಏನೇನೂ ಚೆನ್ನಾಗಿಲ್ಲ. ಅವರಿಗೆ ನೈತಿಕ ಪ್ರಜ್ಞೆ ಸ್ವಲ್ಪವೂ ಇಲ್ಲ.

ಮೇರಿ ಮಾತನಾಡುತ್ತಿದ್ದಾಗ ಸುರೇಂದ್ರಮೇತ್ತರು ಅಲ್ಲಿಯೇ ಬಂದರು. ಅವರು ಇನ್ಸ್‌ಪೆಕ್ಟರ್‌ನ್ನು ತಮ್ಮ ಕೋಣೆಗೆ ಆಹ್ವಾನಿಸಿದರು. ಬಾಗಿಲು ಹಾಕಿದ ನಂತರ

ಅವರೆಂದರು:

"ಗೋಡೆಗಳಿಗೂ ಕಿವಿಗಳಿವೆ"

"ನೀವು ನಿನ್ನೆ ರಾತ್ರಿ ಅನಸೂಯಾದೇವಿಯವರ ಡಿನ್ನರಿಗೆ ಹೋಗಿದ್ದಿರಾ?" ಇನ್ಸ್‌ಪೆಕ್ಟರ್ ಕೇಳಿದರು.

"ಹೌದು. ನಾನು ಏಳೂವರೆ ಗಂಟೆಯಿಂದ ಹನ್ನೊಂದುವರೆತನಕ ಅಲ್ಲಿದ್ದೆ" ಮೇತ್ರ ಹೇಳಿದರು. ಅವರ ಹಸ್ತಗಳು ಅಕಾರಣವಾಗಿ ಕಂಪಿಸುತ್ತಿದ್ದವು.

"ನಿಮ್ಮ ಮತ್ತು ಅವರ ಮಧ್ಯೆ ಇದ್ದ ಸಂಬಂಧ?" ಇನ್ಸ್‌ಪೆಕ್ಟರಂ ಕೇಳಿದರು.

"ನಾನು ಅವರ ಅಭಿಮಾನಿ" ಸುರೇಂದ್ರಮೇತ್ರ ಹೇಳಿದರು. "ನಾನು ನನ್ನ ಜೀವನದಲ್ಲಿ ಯಾರನ್ನೂ ಇಷ್ಟೊಂದು ಪ್ರೀತಿಸಿರಲಿಲ್ಲ. ಆಕೆ ದುಃಖಿತೆಯಾಗಿದ್ದರು. ಒಂಟಿಯಾಗಿದ್ದರು. ಆಕೆಯ ಹತ್ತಿರ ಈ ನಗರವನ್ನು ಬಿಟ್ಟು ನನ್ನ ಜತೆಗೆ ಗುಜರಾತ್‌ಗೆ ಬನ್ನಿ ಎಂದು ನಾನು ಎಷ್ಟೋ ಬಾರಿ ಒತ್ತಾಯಿಸಿದ್ದೆ. ಹಾಗೆ ಮಾಡಿದ್ದರೆ ಅವರ ಜೀವ ಸುರಕ್ಷಿತವಾಗಿರುತ್ತಿತ್ತು. ಇಲ್ಲಿ ಎಲ್ಲರೂ ಅವರ ರಹಸ್ಯಶತ್ರುಗಳಾಗಿದ್ದರು. ಆಕೆಯ ಪತಿಕೂಡಾ. ನಾನು ಆಕೆಯನ್ನು ಸಂತೋಷಪಡಿಸುತ್ತಿದ್ದೆ. ಆಕೆಗೆ ಸುರಕ್ಷಿತತೆಯ ಭಾವನೆ ನೀಡುತ್ತಿದ್ದೆ. ಆದರೆ ಆಕೆ ಸುಮ್ಮನೆ ನಕ್ಕು ನನ್ನನ್ನು ಕಳಿಸಿಬಿಡುತ್ತಿದ್ದರು. ನನ್ನನ್ನು 'ಹುಚ್ಚುಮುಂಡೇದು' ಎಂದು ಹೇಳಿ ತಮಾಷೆ ಮಾಡುತ್ತಿದ್ದರು. ನಾನು ವಯಸ್ಸಿನಲ್ಲಿ ಆಕೆಗಿಂತ ಚಿಕ್ಕವನು. ನನಗೆ ಮೂವತ್ತೈದಷ್ಟೇ ಆಗಿದೆ. ಆಕೆಗೆ ನಲವತ್ತಾಗಿರಬೇಕು. ಆದರೆ ಆಕೆ ಉದಯಿಸುವ ಸೂರ್ಯಕಾಂತಿಯುಳ್ಳವರಾಗಿದ್ದರು. ಆಕೆಯನ್ನು ಒಮ್ಮೆ ನೋಡಿದರೂ ಮರೆಯಲು ಸಾಧ್ಯವಿಲ್ಲ."

"ನಿನ್ನೆ ರಾತ್ರಿ ಅಲ್ಲಿದ್ದ ಎಲ್ಲ ಅತಿಥಿಗಳೂ ನಿಮಗೆ ನೆನಪಿದ್ದಾರೆಯೇ?" ಇನ್ಸ್‌ಪೆಕ್ಟರ್ ಕೇಳಿದರು.

"ಅಯ್ಯೋ ಇಲ್ಲ. ಇಲ್ಲ" ಮೇತ್ರರು ಹೇಳಿದರು. "ಹಲವಾರು ಹೊಸಮುಖಗಳನ್ನು ನಾನಲ್ಲಿ ನೋಡಿದ್ದೆ. ಆಕೆ ನಡೆಸುವ ಪಾರ್ಟಿಗಳಲ್ಲಿ ಯಾವಾಗಲೂ ಹಾಗೆ ಅಪರಿಚಿತರು ಇದ್ದೇ ಇರುತ್ತಾರೆ. ನಗರವನ್ನು ಸಂದರ್ಶಿಸುವ ಸಾಹಿತಿಗಳೂ ಕಲಾವಿದರೂ ಅಲ್ಲಿಗೆ ಬಂದು ಆಕೆಯ ಆತಿಥ್ಯವನ್ನು ಸ್ವೀಕರಿಸದೆ ಹಿಂದಿರುಗಿ ಹೋಗುವುದೆಂದೇ ಇಲ್ಲ."

"ಅನಸೂಯಾ ದೇವಿಯ ವರ್ತನೆಯಲ್ಲಿ ನೀವು ನಿನ್ನೆ ರಾತ್ರಿ ಏನಾದರೂ ವ್ಯತ್ಯಾಸ ಗಮನಿಸಿದ್ದಿರೆಯೇ?" ಇನ್ಸ್‌ಪೆಕ್ಟರ್ ಕೇಳಿದರು.

"ಹಾಗೇನಿಲ್ಲ. ಆಕೆ ಸಂತೋಷವಾಗಿಯೇ ಇದ್ದರು. ಅತಿಥಿಗಳೆಲ್ಲರ ಜತೆಯೂ ಹರಟುತ್ತ ಓಡಾಡುತ್ತಿದ್ದರು. ಬಿಳೀ ಸೀರೆಯುಟ್ಟು, ಬಿಳೀ ಹೂಮಾಲೆ ಮುಡಿದುಕೊಂಡು ಸರಸ್ವತೀದೇವಿಯಂತೆ...... ಆ ದೃಶ್ಯವನ್ನು ಇನ್ನು ಎಂದೂ ಕಾಣಲು ಸಾಧ್ಯವಿಲ್ಲವಲ್ಲ."

ಮೇಷ್ಟ್ರು ಕೈ ಬೆರಳುಗಳಿಂದ ಮುಖಮುಚ್ಚಿ ಅಳತೊಡಗಿದರು.

"ಆಕೆಗೆ ಯಾರಾದರೂ ಪ್ರಿಯಕರರು ಇದ್ದರೆ?" ಇನ್ಸ್‌ಪೆಕ್ಟರ್ ಕೇಳಿದರು.

"ಖಂಡಿತ ಇಲ್ಲ" ಮೇಷ್ಟ್ರ ಹೇಳಿದರು. "ಆಕೆ ಒಬ್ಬ ಯೋಗಿನಿಯಂತೆ ಜೀವಿಸುತ್ತಿದ್ದರು. ವಿವಾಹಿತೆಯಾಗಿದ್ದೂ ಬ್ರಹ್ಮಚಾರಿಣಿ. ಆಕೆಯೇ ನನ್ನಲ್ಲಿ ಅದನ್ನೆಲ್ಲ ಮನಸ್ಸು ಬಿಚ್ಚಿ ಹೇಳಿದ್ದಾರೆ. ಆಕೆ ವಿವಾಹವಿಚ್ಛೇದನ ಪಡೆಯಬಹುದಿತ್ತು. ಆ ಕಾಡುಮನುಷ್ಯನ ಜತೆಗೆ ಜೀವನ ನಡೆಸಬೇಕಾದ ಅಗತ್ಯವೇನೂ ಆಕೆಗಿರಲಿಲ್ಲ. ಆದರೆ ಆಕೆ ತನ್ನ ಕುಟುಂಬದ ಒಳ್ಳೆಯ ಹೆಸರನ್ನು ಕೆಡಿಸಲು ಇಚ್ಛಿಸಲಿಲ್ಲ. ಅದಕ್ಕೆ ಕಳಂಕ ಹಚ್ಚಲು ಆಕೆಗೆ ಮನಸ್ಸಾಗಲಿಲ್ಲ."

ಇನ್ಸ್‌ಪೆಕ್ಟರ್‌ಎದ್ದು ನಿಂತರು. "ನಾನು ಆ ಮೇಲೆ ಬಂದು ಕಾಣುತ್ತೇನೆ. ನೀವು ನನಗೆ ಆಕೆಯ ನಿಜಸ್ವರೂಪ ತೋರಿಸಿಕೊಟ್ಟಿರಿ" ಅವರೆಂದರು.

"ನಿಜ ಸ್ವರೂಪವೇನೆಂಬುದು ನನಗೆ ಮಾತ್ರ ಗೊತ್ತು" ಮೇಷ್ಟ್ರ ಹೇಳಿದರು. "ಬೇರೆಯಾರಲ್ಲೂ ಆಕೆ ಮನಸ್ಸು ಬಿಚ್ಚಿ ಮಾತನಾಡುತ್ತಿರಲಿಲ್ಲ."

"ನೀವು ಆಕೆಯ ಪ್ರಿಯಕರನಾಗಿದ್ದಿರಾ?" ಇನ್ಸ್‌ಪೆಕ್ಟರ್ ಕೇಳಿದರು.

"ಇಲ್ಲ" ಮೇಷ್ಟ್ರ ಹೇಳಿದರು. ಆಕೆ ಇನ್ನೂ ಸ್ವಲ್ಪ ಕಾಲ ಬದುಕಿದ್ದರೆ ನಾನು ಪ್ರಿಯಕರನಾಗುತ್ತಿದ್ದೆ.... ಈ ಶನಿವಾರ ನನ್ನೊಂದಿಗೆ ಖಂಡಾಲಾಕ್ಕೆ ಬರುತ್ತೇನೆಂದು ಆಕೆ ಮಾತು ಕೊಟ್ಟಿದ್ದರು. ಆ ವಿಲಾಸಿಧಾಮದಲ್ಲಿ ನಾನು ಆಕೆಯನ್ನು ನನ್ನ ಪ್ರೀತಿಯಿಂದ ಬಂಧಿಸಿಬಿಡುತ್ತಿದ್ದೆ......

"ಏನು ಮಾಡುವುದು? ನಿಮಗೆ ಆ ಅದೃಷ್ಟವಿಲ್ಲದೆ ಹೋಯಿತು. ಇನ್ಸ್‌ಪೆಕ್ಟರ್ ಹೇಳಿದರು." ನಿಮ್ಮ ಈ ಪ್ಲಾನ್ ಬೇರೆ ಯಾರಿಗಾದರೂ ಗೊತ್ತಿತ್ತೆ? ಮುಖ್ಯವಾಗಿ, ಈ ಕೋಣೆಯ ಹೊರಗೆ ನೋಡಿದ ಆ ಹುಡುಗಿಗೆ?

"ಅವಳು ನನ್ನ ಡೈರಿ ಓದುತ್ತಿದ್ದುದನ್ನು ಒಮ್ಮೆ ನಾನು ಕಂಡು ಬಿಟ್ಟೆ. ತುಂಬ ಜೈದೆ. ಆದರೆ ಅವಳೊಬ್ಬ ಅರೆಹುಚ್ಚಿ ಅಷ್ಟೆ. ಕಿಟಕಿಯಿಂದ ಹಾರಿ ಕೂಡಾ ಕೆಲವೊಮ್ಮೆ ನನ್ನ ಕೋಣೆಯನ್ನು ಪ್ರವೇಶಿಸುವುದಿದೆ."

"ಅವಳಿಗೆ ನಿಮ್ಮ ಮೇಲೆ ಅತಿಯಾದ ಪ್ರೇಮವಿದೆ ಎಂಬುದು ಮಾತ್ರ ನನಗೆ ಚೆನ್ನಾಗಿ ಅರ್ಥವಾಯಿತು." ಇನ್ಸ್‌ಪೆಕ್ಟರ್ ಹೇಳಿದರು.

"ಛಛ! ಆ ಕುರೂಪಿಗೇ? ನಾನು ಕನಸಿನಲ್ಲೂ ಅವಳನ್ನು ಹೆಂಡತಿಯಾಗಿ ಕಾಣಲಾರೆ" ಮೇಷ್ಟ್ರು ಉದಾಸೀನತೆ ವ್ಯಕ್ತಪಡಿಸಿದರು.

"ಕುರೂಪಿಗಳ ಪ್ರೇಮ ಕೆಲವೊಮ್ಮೆ ಅಪಾಯಕಾರಿಯಾಗಿರುತ್ತದೆ" ಇನ್ಸ್‌ಪೆಕ್ಟರ್ ಹೇಳಿದರು. "ಅದನ್ನು ನೆನಪಿನಲ್ಲಿಡಬೇಕು."

"ಅದನ್ನು ಹೇಳಲಾಗದು" ಅಕಾರಾಮ್ ಹೇಳಿದ. "ಮುಸ್ಲಿಮ್ ಮಹಿಳೆಯರು ಧರಿಸುವ ಕಡು ಬಣ್ಣದ ರೇಶಿಮೆ ಬುರ್ಖಾ ಧರಿಸಿದ್ದರು ಅವರು."

"ಓಹ್! ಈ ವ್ಯವಸ್ಥೆ ಮಾಡಿದ್ದು ಓರ್ವ ಮಹಿಳೆಯೇ?" ಇನ್ಸ್‌ಪೆಕ್ಟರ್ ಕೇಳಿದರು.

ಹೌದು. ನಾನು ಅವರ ಕೈ ಮಾತ್ರ ನೋಡಿದೆ. ಒಂದು ಹಳೆಯ ನಾಣ್ಯವನ್ನು ಬೆಳ್ಳಿಯಲ್ಲಿ ಕಟ್ಟಿದ ಒಂದು ಉಂಗುರವನ್ನು ಅವರು ಧರಿಸಿದ್ದರು. ನಡು ಬೆರಳಿನಲ್ಲಿ.. ಜರಿಸೀರೆಯುಟ್ಟು, ತಲೆಯಲ್ಲಿ ಹೂಮಾಲೆ ಮುಡಿದ ಮಧ್ಯವಯಸ್ಸಿನ ಹೆಂಗಸನ್ನು ಕೊಲ್ಲಬೇಕೆಂದು ಹೇಳಿದರು. ಎಲ್ಲ ಅತಿಥಿಗಳೂ ಹೋಗಿಯಾದ ನಂತರವಾಗಿತ್ತು. ನಾನು ಆ ಮಹಿಳೆಯನ್ನು ಕೊಂದದ್ದು. ಅವರೇ ಆಗಿದ್ದರು ಮನೆಯೊಡತಿ ಭಯ ಪ್ರಕಟಿಸಲೇ ಇಲ್ಲ. ಹುಸು ನಕ್ಕರೇನೋ ಅಂತ ನನಗೆ ಸಂದೇಹ ಮೂಡಿತು. ಜೀವನದಲ್ಲಿ ಮೊತ್ತ ಮೊದಲಬಾರಿಗೆ ನನಗೆ ಪಶ್ಚಾತ್ತಾಪ ತೋರಿತು. ಅವರ ಶವವನ್ನಲ್ಲೇ ಬಿಟ್ಟು ಹೊರಟು ಒಮ್ಮೆ ತಿರುಗಿ ನೋಡಿದಾಗ..... ಅವರು ಒಬ್ಬ ಪರಿಶುದ್ಧ ಮಹಿಳೆಯಾಗಿದ್ದರು ಸಾಹೇಬರೇ. ಅವರ ಮುಖದ ಮೇಲಿನ ಚೈತನ್ಯವು ನನ್ನನ್ನು ಅಳುವಂತೆ ಮಾಡಿತು. ಆ ಕ್ಷಣ ನನಗೆ ನನ್ನ ಅಮ್ಮನ ನೆನಪಾಯಿತು. ನನಗೆ ಎಂಟು ವರ್ಷ ವಯಸ್ಸಾಗಿದ್ದಾಗ ನನ್ನನ್ನು ಬಿಟ್ಟು ಹೋದ ಅಮ್ಮ. ನನ್ನ ಕೈಗಳು ಕಂಪಿಸಿದವು. ಸತ್ತು ಮಲಗಿದ ಆ ಮಹಿಳೆಯ ಪಾದ ಮುಟ್ಟಿ ಕ್ಷಮೆಯಾಚಿಸಿದೆ. ಅವರನ್ನು ಕೊಲ್ಲಲು ಹಣ ನೀಡಿದ ಆ ಸ್ತ್ರೀಯನ್ನು ಮನದಲ್ಲೇ ಶಪಿಸಿದೆ. ಯಾರೋ ವ್ಯಭಿಚಾರಿಣಿಯಾಗಿರಲೂಬಹುದು. ಸತ್ತ ಮಹಿಳೆಯ ಗಂಡನ ಆಸ್ತಿಯ ಮೇಲೆ ಕಣ್ಣಿಟ್ಟವಳಾಗಿರಬಹುದು...... ಸಾಮಾನ್ಯವಾಗಿ ಕೊಂದದಕ್ಕೆ ಸಾಕ್ಷಿಯಾಗಿ ಶವದ ಮೈಯಿಂದ ಯಾವುದಾದರೊಂದು ಆಭರಣವನ್ನು ನಾನು ಎತ್ತಿಟ್ಟುಕೊಳ್ಳುವುದಿದೆ. ಆದರೆ ಈ ಮಹಿಳೆ ಆಭರಣ ತೆಗೆದುಕೊಳ್ಳಲು ನನಗೆ ಮನಸ್ಸು ಬರಲಿಲ್ಲ. ಅವರ ಕೈಯಲ್ಲೂ ಒಂದು ನಾಣ್ಯದುಂಗುರವಿತ್ತು. ಆ ಇನ್ನೊಬ್ಬ ಮಹಿಳೆ ಕೈಯಲ್ಲಿದ್ದುದರ ತದ್ರೂಪ. ಅದನ್ನು ನಾನು ಕಳಚಿತೆಗೆದುಕೊಳ್ಳಬಹುದಾಗಿತ್ತು. ಆದರೆ ಕೊಂದ ಸಾಕ್ಷಿಯನ್ನು ಯಾರಿಗೆ ತಾನೇ ತೋರಿಸಬೇಕು? ಕೊಲ್ಲಿಸಿದವರು ಇಡೀ ಹಣ ಕೊಟ್ಟಾಗಿ ಬಿಟ್ಟಿದೆಯಲ್ಲ? ಆದ್ದರಿಂದ ನಾನು ಆ ಉಂಗುರ ಕಳಚಿ ತೆಗೆಯಲಿಲ್ಲ. ಅದು ನನ್ನ ಉಂಗುರ ಬೆರಳಿಗೆ ಸರಿಯಾಗುತ್ತಿತ್ತು. ಆದರೆ ನನಗೆ ಬೆಳ್ಳಿ ಇಷ್ಟವಿಲ್ಲ. ಚಿನ್ನದ ಮೇಲೆ ಹೆಚ್ಚು ಆಸೆ."

"ಬಾ ಅಕಾರಾಮ್" ಇನ್ಸ್‌ಪೆಕ್ಟರ್ ಹೇಳಿದ "ನನ್ನ ಜೊತೆಗೆ ಪೋಲೀಸ್‌ಸ್ಟೇಷನ್ನಿಗೆ ಬಾ. ನೀನು ನಿನ್ನ ಕರ್ತವ್ಯ ನಿರ್ವಹಿಸಿದೆ. ಇನ್ನು ನಾನು ನನ್ನ ಕರ್ತವ್ಯ ನಿರ್ವಹಿಸುತ್ತೇನೆ."





## ಹೆನ್ರಿಟಾ ಲ್ಯಾಕ್ಸ್ ಎಂಬ ಕಪ್ಪು ಮಹಿಳೆಯ 'ಅಮರ' ಕತೆ

■ ಡಾ.ಜೆ. ಬಾಲಕೃಷ್ಣ

೨೦೦೧ರಲ್ಲಿ ಜಾನ್ಸ್ ಹಾಪ್‌ಕಿನ್ಸ್‌ನ ಆಸ್ಪತ್ರೆಯಲ್ಲಿನ ಆಸಕ್ತಿಯಾದ ಸಂಶೋಧಕರೊಬ್ಬರು ಹೆನ್ರಿಟಾ ಲ್ಯಾಕ್ಸ್ ಎಂಬ ನೀಗ್ರೋ ಮಹಿಳೆಯ ಮಗಳಾದ ಡೆಬೋರಾ ಲ್ಯಾಕ್ಸ್‌ಳನ್ನು ಹಾಗೂ ಆಕೆಯ ತಮ್ಮನನ್ನು ತಮ್ಮ ಪ್ರಯೋಗಾಲಯಕ್ಕೆ ಆಹ್ವಾನಿಸಿದರು. ಅಲ್ಲಿ ಅವರನ್ನು ನೆಲಮಾಳಿಗೆಯೊಂದಕ್ಕೆ ಕರೆದೊಯ್ದು ಶೀತಲಘನೀಕೃತ ಗಾಜಿನ ನಾಳಗಳನ್ನು ಡೆಬೋರಾಳ ಕೈಯಲ್ಲಿರಿಸಿ ಅದರಲ್ಲಿನ ಜೀವಕೋಶಗಳು ಆಕೆಯ ತಾಯಿಯದು ಎಂಬುದಾಗಿ ತಿಳಿಸಿದರು. ಅಲ್ಲಿ ತನ್ನ 'ತಾಯಿ'ಯನ್ನು 'ಕಂಡ' ಡೆಬೋರಾ ಅತ್ಯಂತ ಭಾವುಕಳಾಗಿ ಅವುಗಳನ್ನು ಅತ್ಯಮೂಲ್ಯ ವಸ್ತುವೆಂಬಂತೆ ತನ್ನ ಬೊಗಸೆಯಲ್ಲಿ ಹಿಡಿದು ಚುಂಬಿಸಿ 'ನೀನೀಗ ಖ್ಯಾತಳಾಗಿದ್ದೀಯೆ. ಆದರೆ ಯಾರಿಗೂ ಅದು ತಿಳಿದಿಲ್ಲ' ಎಂದು ಪಿಸುಗುಟ್ಟಿದಳು. ಆಕೆಯ ತಮ್ಮ, 'ನಮ್ಮ ತಾಯಿ ವಿಜ್ಞಾನ ಜಗತ್ತಿಗೆ ಅಷ್ಟೊಂದು ಬೇಕಾದವಳಾಗಿದ್ದಾಳೆ. ಆದರೆ ನಾವೇಕೆ ಬಡತನದಲ್ಲಿ ನರಳುತ್ತಿದ್ದೇವೆ?' ಎಂದು ಕೇಳಿದ. ಹೆನ್ರಿಟಾ ಲ್ಯಾಕ್ಸ್ ಎಂಬ ನೀಗ್ರೋ ಮಹಿಳೆಯ ಕತೆ ಕ್ಯಾನ್ಸರ್ ಜನಾಂಗಭೇದ, ವೈಜ್ಞಾನಿಕ ನೈತಿಕತೆಗಳು ಹಾಗೂ ಕಡುಬಡತನದ ಕುಟುಂಬದ ಒಂದು ಕತೆಯಾಗಿದೆ. ಈ ಕತೆ ಪ್ರಾರಂಭವಾದದ್ದು ೧೯೫೧ರ ಫೆಬ್ರವರಿಯಲ್ಲಿ.

ಫೆಬ್ರವರಿ ೧೯೫೧ರ ಒಂದು ದಿನ ಹೆನ್ರಿಟಾ ಲ್ಯಾಕ್ಸ್

ಎಂಬ ಆಫ್ರಿಕನ್–ಅಮೆರಿಕನ್ ಗುಲಾಮ ಸಂತತಿಯ ನೀಗ್ರೋ ಹೆಣ್ಣು ಅಮೆರಿಕದ ಬಾಲ್ಟಿಮೋರ್‌ನಲ್ಲಿನ ಜಾನ್ಸ್ ಹಾಪ್‌ಕಿನ್ಸ್ ಆಸ್ಪತ್ರೆಯ ನೀಗ್ರೋಗಳಿಗೆಂದೇ ಪ್ರತ್ಯೇಕವಾಗಿರಿಸಿದ್ದ ವಾರ್ಡ್‌ನ ಹಾಸಿಗೆಯೊಂದರಲ್ಲಿ ಪ್ರಜ್ಞಾಶೂನ್ಯಳಾಗಿ ಬಿದ್ದಿದ್ದಳು. ನೀಗ್ರೋಗಳಿಗೆ ಚಿಕಿತ್ಸೆ ನೀಡುತ್ತಿದ್ದ ಹತ್ತಿರದ ಆಸ್ಪತ್ರೆ ಅದೇ ಆಗಿದ್ದುದರಿಂದ ಆಕೆ ೨೦ ಮೈಲುಗಳ ಪ್ರಯಾಣ ಮಾಡಿಬಂದಿದ್ದಳು. ಉಲ್ಬಣಗೊಂಡಿದ್ದ ತೀವ್ರ ಗರ್ಭಕೋಶದ ಕೊರಳಿನ ಕ್ಯಾನ್ಸರ್‌ನಿಂದ ನರಳುತ್ತಿದ್ದ ಆಕೆಯ ಬಳಿಯೇ ಸಾವು ಹೊಂಚುಹಾಕಿ ನಿಂತಿತ್ತು. ಎಂದಿನಂತೆ ವೈದ್ಯರು ಪರೀಕ್ಷೆಗಾಗಿ ಆಕೆಯ ಗರ್ಭಕೋಶದ ಕೊರಳಿನ ಕ್ಯಾನ್ಸರ್‌ಯುಕ್ತ ಜೀವಕೋಶಗಳ ಅಂಗಾಂಶದ ತುಣುಕನ್ನು ಕತ್ತರಿಸಿ ತೆಗೆದು ಅದೇ ಆಸ್ಪತ್ರೆಯ ಅಂಗಾಂಶ ಸಾಕಣೆ ಸಂಶೋಧನೆಯ ಮುಖ್ಯಸ್ಥರಾಗಿದ್ದ ಜಾರ್ಜ್ ಗೌರವರಿಗೆ ಕಳುಹಿಸಿಕೊಟ್ಟರು. ಆ ತುಣುಕನ್ನು ತೆಗೆದದ್ದು ಹೆನ್ರಿಟಾ ಲ್ಯಾಕ್ಸ್‌ಗಾಗಲಿ, ಆಕೆಯ ಕುಟುಂಬದವರಿಗಾಗಲಿ ಅಥವಾ ಹೊರಜಗತ್ತಿಗಾಗಲಿ ತಿಳಿದಿರಲಿಲ್ಲ. ಆದರೆ ಆ ಅಂಗಾಂಶದ ತುಣುಕು ವೈದ್ಯಕೀಯ ಜಗತ್ತಿನಲ್ಲಿ ಬಹುದೊಡ್ಡ ಕ್ರಾಂತಿಯನ್ನೇ ಉಂಟುಮಾಡುವುದಾಗಿ ಯಾರೂ ಊಹಿಸಿರಲಿಲ್ಲ. ವೈದ್ಯರೂ ಸಹ ಅಂತಹ ಉಲ್ಬಣ ಕ್ಯಾನ್ಸರ್ ಕಂಡಿರಲಿಲ್ಲ. ಕೆಲವೇ ತಿಂಗಳುಗಳಲ್ಲಿ ಆಕೆಯ ಮೈಯಲ್ಲಾ ಕ್ಯಾನ್ಸರ್ ಗೆಡ್ಡೆಗಳುಂಟಾದವು. ಅತ್ಯಂತ ನೋವಿನಿಂದ ನರಳಿದ ಹೆನ್ರಿಟಾ ಲ್ಯಾಕ್ಸ್ ಅದೇ ವರ್ಷ ಅಕ್ಟೋಬರ್ ೪ರಂದು ತನ್ನ ಐದು ಮಕ್ಕಳನ್ನು ಮತ್ತು ಗಂಡನನ್ನು ಬಿಟ್ಟು ಕೊನೆಯುಸಿರೆಳೆದಳು. ಆಕೆ ಸತ್ತಾಗ ಆಕೆಗೆ ೩೧ ವರ್ಷ ವಯಸ್ಸು. ಅತ್ಯಂತ ಬಡತನದಲ್ಲಿದ್ದ ಆಕೆಯ ಕುಟುಂಬದವರು ಆಕೆಯನ್ನು ತಮ್ಮ ಹಳ್ಳಿಗೆ ಕೊಂಡೊಯ್ದು ಹೂತುಬಿಟ್ಟರು. ಕೊನೆಗೆ ತನ್ನ ಅಂಗಾಂಶದಿಂದ ಜಗತ್ಪ್ರಸಿದ್ಧಳಾದ ಆಕೆಯ ಸಮಾಧಿಯನ್ನೂ ಸಹ ಗುರುತಿಸಲು ಸಾಧ್ಯವಾಗಲಿಲ್ಲ.

ಪ್ರಯೋಗಾಲಯಗಳಲ್ಲಿ ಆಕೆಯ ಕ್ಯಾನ್ಸರ್‌ಯುಕ್ತ ಜೀವಕೋಶಗಳನ್ನು ವೃದ್ಧಿಗೊಳಿಸಿ ಜಗತ್ತಿನಾದ್ಯಂತ ವಿಜ್ಞಾನಿಗಳು, ವೈಜ್ಞಾನಿಕ ವ್ಯಾಪಾರಿ ಸಂಸ್ಥೆಗಳು ಅಂತಹ ಜೀವಕೋಶಗಳಿರುವ ಪ್ರತಿ ಸಣ್ಣ ಸೀಸೆಯನ್ನು ೧೦ ಡಾಲರ್‌ನಿಂದ ಹಿಡಿದು ೧೦೦೦೦ ಡಾಲರ್‌ವರೆಗೂ ಮಾರಾಟಮಾಡತೊಡಗಿದರು. ವೈದ್ಯಕೀಯ ಸಂಶೋಧನೆಯಲ್ಲಿ ಜಗತ್ತಿನಾದ್ಯಂತ ಆ ಜೀವಕೋಶಗಳು ಹರಡಿದ್ದಲ್ಲದೆ ಅಂತರಿಕ್ಷಕ್ಕೂ ಹೋಗಿಬಂದವು. ಆದರೆ ಆ ವಿಷಯ ಹೆನ್ರಿಟಾ ಲ್ಯಾಕ್ಸಳ ಕುಟುಂಬದವರಿಗೆ ತಿಳಿದೇ ಇರಲಿಲ್ಲ. ವೈದ್ಯಕೀಯ ರಂಗದಲ್ಲಿ ಹೆನ್ರಿಟಾ ಲ್ಯಾಕ್ಸಳ ಜೀವಕೋಶಗಳ ಕೊಡುಗೆ ಅಗಣನೀಯ ಮೌಲ್ಯದ್ದಾಗಿತ್ತು. ಆದರೆ ಆಕೆಯ ಗಂಡ, ಮಕ್ಕಳು ಅದೆಷ್ಟು ಬಡತನದಲ್ಲಿದ್ದರೆಂದರೆ ಅವರಿಗೆ ವೈದ್ಯಕೀಯ ವಿಮೆ ಸಹ ಇರಲಿಲ್ಲ. ಅನಾರೋಗ್ಯವಾಗಿ ಅವರ ಕಾಯಿಲೆ ಕಸಾಲೆಗಳಿಗೆ ಅವರು ಆಸ್ಪತ್ರೆಗೆ ಸಹ ಭೇಟಿ ನೀಡುವಂತಿರಲಿಲ್ಲ.

ಹೆನ್ರಿಟಾ ಲ್ಯಾಕ್ಸಳು 'ಅಮರ'ಳಾಗಿದ್ದಾಳೆಂದು ಇಂದು ವಿಜ್ಞಾನ ಜಗತ್ತು ಸಾರುತ್ತಿದೆ.

ಆಕೆ ೧೯೫೧ರಲ್ಲೇ ಇಹಲೋಕ ತ್ಯಜಿಸಿದ್ದರೂ ಆಕೆಯ ದೇಹದಿಂದ ಕತ್ತರಿಸಿ ತೆಗೆದ ಗರ್ಭಕೋಶದ ಕೊರಳಿನ ಕ್ಯಾನ್ಸರ್‌ಯುಕ್ತ ಜೀವಕೋಶಗಳ ಅಂಗಾಂಶದ ತುಣುಕು ಇಂದಿಗೂ ಜಗತ್ತಿನ ಪ್ರಯೋಗಾಲಯಗಳಲ್ಲಿ ಒಂದು ಎರಡಾಗಿ, ಎರಡು ನಾಲ್ಕಾಗಿ, ನಾಲ್ಕು ಎಂಟಾಗಿ ವೃದ್ಧಿಗೊಳ್ಳುತ್ತಲೇ ಇವೆ. ವಿಜ್ಞಾನ ಜಗತ್ತಿನಲ್ಲಿ ಆ ಜೀವಕೋಶಗಳನ್ನು 'ಹೀಲಾ' (ಸ್ಪೆಲ್ಲಿಂಗ್ Hela ಆದರೂ ಉಚ್ಚಾರಣೆ ಹೀಲಾ ಎಂದು) ಜೀವಕೋಶಗಳೆಂದು ಕರೆವರು. 'ಹೀಲಾ' ಎಂದರೆ ಹೆನ್ರಿಟಾ ಲ್ಯಾಕ್ಸ್‌ನ (Henrietta Lacks) ಸಂಕ್ಷಿಪ್ತ ರೂಪ. ಆದರೆ ಮೊದಲಿಗೆ ಹೆನ್ರಿಟಾ ಲ್ಯಾಕ್ಸ್‌ಳ ಹೆಸರನ್ನು ಗೋಪ್ಯವಾಗಿಡುವ ಸಲುವಾಗಿ ಹೀಲಾ ಎಂದರೆ 'ಹೆಲೆನ್ ಲೇನ್' ಅಥವಾ 'ಹೆಲೆನ್ ಲಾರ್ಸನ್'ರಿಂದ ಪಡೆದ ಜೀವಕೋಶಗಳು ಎನ್ನುತ್ತಿದ್ದರು. ವಿಜ್ಞಾನಿಯೊಬ್ಬರ ಪ್ರಕಾರ ಆ ರೀತಿ ಇದುವರೆಗೆ ವೃದ್ಧಿಗೊಂಡಿರುವ ಆಕೆಯ ಜೀವಕೋಶಗಳ ತೂಕ ಸುಮಾರು ೫೦ ದಶಲಕ್ಷ ಮೆಟ್ರಿಕ್ ಟನ್‌ಗಳಷ್ಟಾಗಿರಬಹುದು! ಪ್ರತಿಯೊಂದು ಜೀವಕೋಶ ಅದೆಷ್ಟು ಸೂಕ್ಷ್ಮವಾಗಿರುತ್ತದೆಯೆಂದರೆ ಅವು ಬರಿಗಣ್ಣಿಗೆ ಕಾಣುವುದಿಲ್ಲ. ಅವುಗಳನ್ನು ಸೂಕ್ಷ್ಮದರ್ಶಕದ ಮೂಲಕವೇ ನೋಡಬೇಕು. ಇದುವರೆಗೆ ವೃದ್ಧಿಗೊಂಡಿರುವ ಆಕೆಯ ಜೀವಕೋಶಗಳನ್ನು ಒಂದಕ್ಕೆ ಒಂದರಂತೆ ಜೋಡಿಸಿದರೆ ಇಡೀ ಭೂಮಿಯನ್ನು ಮೂರು ಸುತ್ತು ಹಾಕಬಹುದು! ಆಕೆ ಬದುಕಿದ್ದಾಗ ಆಕೆಯೆತ್ತರ ಸುಮಾರು ಐದಡಿಯಷ್ಟೇ ಇತ್ತು.

ಪ್ರಯೋಗಾಲಯದಲ್ಲಿ ಗಾಜಿನ ನಳಿಕೆಗಳಲ್ಲಿ ವೃದ್ಧಿಗೊಂಡ ಮೊಟ್ಟಮೊದಲ ಅಂಗಾಂಶವೇ ಈಕೆಯದು. ಅದರಿಂದಾಗಿ ವೈದ್ಯಕೀಯ ರಂಗದಲ್ಲಿ ಅದು ಕ್ರಾಂತಿಯನ್ನೇ ಉಂಟುಮಾಡಿತು. ಹೀಲಾ ಜೀವಕೋಶಗಳ ಸಾಲಿನ ಮೌಲ್ಯ ಅಗಣಿತವಾದುದು: ಅವುಗಳ ಮೇಲೆ ಮೊಟ್ಟಮೊದಲ ಪೋಲಿಯೋ ಲಸಿಕೆಯನ್ನು ಪರೀಕ್ಷಿಸಲಾಯಿತು. ಹಲವಾರು ಕ್ಯಾನ್ಸರ್ ಔಷಧಗಳ, ಪಾರ್ಕಿನ್‌ಸನ್, ಲ್ಯೂಕೇಮಿಯಾ ಮತ್ತು ಫ್ಲೂನಂತಹ ಹಲವಾರು ಕಾಯಿಲೆಗಳ ಔಷಧಗಳ ಆವಿಷ್ಕಾರಕ್ಕೆ ಅವು ಕಾರಣವಾದವು ಹಾಗೂ ಹಲವಾರು ಮೂಲಭೂತ ಜೀವಕೋಶ ಪ್ರಕ್ರಿಯೆಗಳ, ರಾಸಾಯನಿಕ ಚಿಕಿತ್ಸೆ, ಕ್ಲೋನಿಂಗ್, ವಂಶವಾಹಿ ಮ್ಯಾಪಿಂಗ್ ಮುಂತಾದವುಗಳ ಅಧ್ಯಯನಕ್ಕೆ ಆಧಾರವಾದವು.

ಆ ಜೀವಕೋಶಗಳ ಮೇಲೆ ಹರ್ಪಿಸ್, ಏಡ್ಸ್ ಮುಂತಾದ ವೈರಸ್ ಕಾಯಿಲೆಗಳ ಅಧ್ಯಯನ ನಡೆಯುತ್ತಿದೆ. ಮಾನವ ಜೀವಕೋಶಗಳ ಮೇಲಾಗುವ ಅಣುಬಾಂಬ್‌ನ ಪರಿಣಾಮಕ್ಕೆ ಆ ಜೀವಕೋಶಗಳನ್ನು ಬಳಸಲಾಗಿದೆ ಹಾಗೂ ಶೂನ್ಯ ಗುರುತ್ವಾಕರ್ಷಣೆ ಮಾನವ ಜೀವಕೋಶಗಳ ಮೇಲೆ ಬೀರುವ ಪರಿಣಾಮದ ಅಧ್ಯಯನಕ್ಕಾಗಿ ಯಾವ ಜೀವಂತ ಮನುಷ್ಯನೂ ಅಂತರಿಕ್ಷಕ್ಕೆ ಕಾಲಿಡುವ ಮೊದಲೇ ಆ ಜೀವಕೋಶಗಳನ್ನು ಅಂತರಿಕ್ಷಕ್ಕೂ ಕಳುಹಿಸಿಕೊಡಲಾಗಿತ್ತು.

ಮಹಿಳೆಯೊಬ್ಬಳ ಜೀವಕೋಶಗಳನ್ನು ಆಕೆಯ ಅಥವಾ ಆಕೆಯ ಕುಟುಂಬದವರ ಅನುಮತಿಯಿಲ್ಲದೆ ಪಡೆದು ಅವುಗಳನ್ನು ಬಳಸುತ್ತಿರುವುದು ಹಲವಾರು ನೈತಿಕ ಸವಾಲುಗಳನ್ನು ಎದುರಿಗಿಡುತ್ತವೆ. ನ್ಯಾಯ, ಗೌರವ ಮತ್ತು ತಿಳಿಸಬೇಕೆಂಬ ಕನಿಷ್ಠ ಸೌಜನ್ಯತೆಯ ಮಿತಿಯನ್ನೂ ಮೀರಿರುವುದು ಇಲ್ಲಿ ಕಣ್ಣಿಗೆ ಕಟ್ಟುವಂತಿದೆ. ಅಮೇರಿಕದ ವೈದ್ಯಕೀಯ ಸಂಶೋಧನೆಗಳ ಜಗತ್ತಿನ ಕರಾಳ ಮುಖದ ಬಗ್ಗೆ ರೆಬೆಕ್ಕಾ ಸ್ಕೂಟ್ ತಮ್ಮ ಕೃತಿ 'ದ ಇಮಾರ್ಟಲ್ ಲೈಫ್ ಆಫ್ ಹೆನ್ರಿಟಾ ಲ್ಯಾಕ್ಸ್'ನಲ್ಲಿ ಹೇಳಿದ್ದಾರೆ. ಅಮೇರಿಕಾದಲ್ಲಿ 'ಕತ್ತಲ ವೈದ್ಯರು' ತಮ್ಮ ಸಂಶೋಧನೆ ಮತ್ತು ಪ್ರಯೋಗಗಳಿಗಾಗಿ ರಾತ್ರಿಯ ಹೊತ್ತು ರಸ್ತೆಯಲ್ಲಿ ಓಡಾಡುತ್ತಿದ್ದ ನೀಗ್ರೋಗಳನ್ನು ಅಪಹರಿಸಿ ಕೊಂಡೊಯ್ಯುತ್ತಿದ್ದರು. ಕುಖ್ಯಾತ ಟಸ್ಕೆಜೀ ಸಿಫಿಲಿಸ್ ಅಧ್ಯಯನದಲ್ಲಿ ಅಲಬಾಮಾಲ್ಲಿ ಅಧ್ಯಯನಕ್ಕಾಗಿ ಸಿಫಿಲಿಸಂ ರೋಗ ಹೊಂದಿರುವ ಬಡ ಮತ್ತು ಅಶಿಕ್ಷಿತ ನೀಗ್ರೋಗಳನ್ನು ಕರೆತಂದು ಅವರಿಗೆ ಪೆನ್ಸಿಲಿನ್ ನೀಡಿ ಬದುಕಿಸುವ ಸಾಧ್ಯತೆಗಳಿದ್ದರೂ ವೈದ್ಯರು ಅವರಿಗೆ ಪೆನ್ಸಿಲಿನ್ ನೀಡುತ್ತಿರುವುದಾಗಿ ಸುಳ್ಳು ಹೇಳಿ ಚಿಕಿತ್ಸೆ ದೊರಕದಿದ್ದಲ್ಲಿ ಕಾಯಿಲೆ ಎಷ್ಟರ ಮಟ್ಟಿಗೆ ಉಲ್ಬಣಗೊಳ್ಳುತ್ತದೆ ಎಂಬುದನ್ನು ಅಧ್ಯಯನ ಮಾಡಲು ಅವರು ನರಳಿ ಸಾಯುವಂತೆ ಮಾಡುತ್ತಿದ್ದರು. ಅಮೇರಿಕಾದ ಸಿ.ಐ.ಎ ಎರಡನೇ ವಿಶ್ವಯುದ್ಧದ ಸಮಯದಲ್ಲಿ ದೇಹದ ಮೇಲೆ ಯಾವುದೇ ಹಿಂಸೆಯ ಕುರುಹು ಕಾಣದಂತೆ ಚಿತ್ರಹಿಂಸೆ ನೀಡುವ ಪ್ರಯೋಗಗಳಿಗಾಗಿ ಸಾವಿರಾರು ನೀಗ್ರೋ ಖೈದಿಗಳನ್ನು ಬಳಸಿಕೊಂಡಿದೆ. ಅಮೆರಿಕಾದಲ್ಲಿ ಗುಲಾಮ ಪದ್ಧತಿ ಚಾಲ್ತಿಯಲ್ಲಿದ್ದಾಗ ನೀಗ್ರೋ ಗುಲಾಮರ ಮೇಲೆ ಹೇಳಕೇಳದಷ್ಟು ಹೊಸ ಔಷಧ ಚಿಕಿತ್ಸೆಗಳ ಹಾಗೂ ಶಸ್ತ್ರಚಿಕಿತ್ಸೆಗಳ ಪ್ರಯೋಗಗಳು ನಡೆದಿವೆ. ಕಳೆದ ಶತಮಾನದ ಪ್ರಾರಂಭದಲ್ಲಿ ಕಪ್ಪು ಜನರ ಸಮಾಧಿಗಳನ್ನು ಅಗೆದು ಶವಗಳನ್ನು ಸಂಶೋಧನೆಗಾಗಿ ವೈದ್ಯಕೀಯ ಶಾಲೆಗಳಿಗೆ ಕಳುಹಿಸಲಾಗುತ್ತಿತ್ತು.

ಜಾನ್ಸ್ ಹಾಪ್‌ಕಿನ್ಸ್‌ನ ಅಂಗಾಂಶ ಸಾಕಣೆ ಸಂಶೋಧನೆಯ ಮುಖ್ಯಸ್ಥರಾಗಿದ್ದ ಜಾರ್ಜ್ ಗೌರವರು ಪ್ರಯೋಗಗಳಿಗಾಗಿ ಪ್ರಯೋಗಾಲಯಗಲ್ಲಿ ಮಾನವ ಅಂಗಾಂಶ ಜೀವಕೋಶಗಳನ್ನು ವೃದ್ಧಿಸುವ ಪ್ರಯತ್ನವನ್ನು ಮುವ್ವತ್ತು ವರ್ಷಗಳಿಂದ ನಡೆಸಿ ವಿಫಲರಾಗಿದ್ದರು. ಆದರೆ ೧೯೫೧ರಲ್ಲಿ ಹೆನ್ರಿಟಾ ಲ್ಯಾಕ್ಸಳ ಜೀವಕೋಶಗಳು ಅವೆಲ್ಲವನ್ನು ಬದಲಿಸಿದವು. ಆಕೆಯ ಜೀವಕೋಶಗಳು ಪ್ರಯೋಗಾಲಯದ ಪೋಷಕಾಂಶಗಳ ಮಾಧ್ಯಮದಲ್ಲಿ ಹುಚ್ಚು ಹಿಡಿದಂತೆ ವೃದ್ಧಿಸತೊಡಗಿದವು. ಅಸುಪಾಸಿನಲ್ಲಿದ್ದ ಇತರ ಜೀವಕೋಶಗಳ ಮೇಲೂ ಆಕ್ರಮಣ ನಡೆಸಿ ಅವುಗಳನ್ನು ತಮ್ಮದಾಗಿಸಿಕೊಂಡವು. ಜಾರ್ಜ್ ಗೌರವರು ಅವುಗಳನ್ನು ಮಾರಾಟ ಮಾಡಿ ತಾವು ಹಣವೇನೂ ಮಾಡಿಕೊಳ್ಳಲಿಲ್ಲ. ಆದರೆ ಈಗ ಅದರ ವಿನಿಮಯ ಸಂಪೂರ್ಣ ವಾಣಿಜ್ಯಮಯವಾಗಿದೆ. ಇಡೀ ಜಗತ್ತಿನಾದ್ಯಂತ ಅವುಗಳ ಕೊಡುಕೊಳ್ಳುವಿಕೆ ಪ್ರತಿದಿನ ನಡೆಯುತ್ತಿದೆ ಹಾಗೂ

ಕೋಟ್ಯಾಂತರ ಡಾಲರ್ ಲಾಭ ಗಳಿಸಿಕೊಟ್ಟಿದೆ. ಮೈಕ್ರೋಬಯಾಲಾಜಿಕಲ್ ಅಸೋಸಿಯೇಟ್ಸ್ ಎಂಬ ಕಂಪನಿ ಹೀಲಾ ಜೀವಕೋಶಗಳನ್ನು ಸಣ್ಣ ಸೀಸೆಯೊಂದಕ್ಕೆ ಹತ್ತು ಸಾವಿರ ಡಾಲರ್‌ನಂತೆ ಮಾರಾಟಮಾಡುತ್ತಿದೆ. ಈ ದಿನ ಹೀಲಾ ಜೀವಕೋಶಗಳನ್ನೊಳಗೊಂಡಂತೆ ಸುಮಾರು ೧೭೦೦೦ಕ್ಕೂ ಹೆಚ್ಚು ಪೇಟೆಂಟ್‌ಗಳಿವೆ. ಹೀಲಾ ಜೀವಕೋಶಗಳ ಮೇಲಿನ ಸಂಶೋಧನಾ ಪ್ರಬಂಧಗಳು ವೈಜ್ಞಾನಿಕ ಪತ್ರಿಕೆಗಳಲ್ಲಿ ಇದುವರೆಗೆ ೬೦೦೦೦ಕ್ಕೂ ಹೆಚ್ಚು ಪ್ರಕಟವಾಗಿದೆ ಹಾಗೂ ಪ್ರತಿ ದಿನ ಸರಾಸರಿ ಹತ್ತು ಪ್ರಬಂಧಗಳಂತೆ ಪ್ರಕಟವಾಗುತ್ತಿವೆ. ಸಾವಿರಾರು ಜನರಿಗೆ ಆ ಜೀವಕೋಶಗಳು ಉದ್ಯೋಗ ದೊರಕಿಸಿಕೊಟ್ಟಿವೆ. ಹೀಲಾ ಜೀವಕೋಶಗಳ ಅಧ್ಯಯನದ ವಿಜ್ಞಾನಿಯೊಬ್ಬರಿಗೆ ನೋಬೆಲ್ ಪಾರಿತೋಷಕ ಸಹ ದೊರಕಿದೆ. ವಿಜ್ಞಾನಿ ಡೆಪ್ಲರ್ ಹೇಳುವಂತೆ ಕಳೆದ ನೂರು ವರ್ಷಗಳಲ್ಲಿ ವೈದ್ಯಕೀಯ ಜಗತ್ತು ಕಂಡಿರುವ ಅತ್ಯುನ್ನತವೆಂದರೆ ಹೀಲಾ ಜೀವಕೋಶಗಳು ಮಾತ್ರ.

ಅಮೇರಿಕಾದ ಪ್ರಖ್ಯಾತ ವಿಜ್ಞಾನ ಪತ್ರಿಕೆ 'ಪಾಪ್ಯುಲರ್ ಸೈನ್ಸ್'ನ ಪ್ರಕಾರ ಈ ಮುಂದಿನ ಐದು ಅಂಶಗಳಿಂದಾಗಿ ಹೀಲಾ ಜೀವಕೋಶಗಳು ಬಹಳ ಮುಖ್ಯವಾಗಿವೆ.

೧. ಹೀಲಾ ಜೀವಕೋಶಗಳ ಪ್ರವೇಶಕ್ಕೆ ಮೊದಲ ವಿಜ್ಞಾನಿಗಳು ಜೀವಕೋಶಗಳ ಮೇಲೆ ನಡೆಸುವ ಸಂಶೋಧನೆಗಳಿಗಿಂತ ಆ ಜೀವಕೋಶಗಳನ್ನು ಜೀವಂತವಾಗಿಡುವಲ್ಲಿ ಹೆಚ್ಚು ಶ್ರಮ ವ್ಯಯಮಾಡುತ್ತಿದ್ದರು. ಹೀಲಾ ಜೀವಕೋಶಗಳು ನಿರಂತರವಾಗಿ ಲಭಿಸಲು ಆರಂಭವಾದಾಗಿನಿಂದ ಅವರಿಗೆ ಸಂಶೋಧನೆಗೆ ಹೆಚ್ಚು ಸಮಯ ಸಿಕ್ಕಿತು.

೨. ೧೯೫೨ ಪೋಲಿಯೋ ಕಾಯಿಲೆಯ ರುದ್ರತಾಂಡವದ ವರ್ಷವಾಗಿತ್ತು. ಕೋಟ್ಯಾಂತರ ಜನರನ್ನು ರಕ್ಷಿಸಿದ ಪೋಲಿಯೋ ಲಸಿಕೆಯನ್ನು ಪರೀಕ್ಷಿಸಲು ಹೀಲಾ ಜೀವಕೋಶಗಳನ್ನು ಬಳಸಲಾಯಿತು.

೩. ಹೆನ್ರಿಟಾ ಲ್ಯಾಕ್ಸ್‌ರವರ ಅಂಗಾಂಶ ಮಾದರಿಯಲ್ಲಿನ ಕೆಲವು ಜೀವಕೋಶಗಳು ಇತರ ಜೀವಕೋಶಗಳಿಗಿಂತ ವಿಭಿನ್ನವಾಗಿ ವರ್ತಿಸುತ್ತಿದ್ದವು. ಅಂತಹ ಒಂದು ನಿರ್ದಿಷ್ಟ ಜೀವಕೋಶವನ್ನು ಪ್ರತ್ಯೇಕಿಸಿ ಅದನ್ನು ವೃದ್ಧಿಸಿ ಒಂದು ಪ್ರತ್ಯೇಕ ಜೀವಕೋಶ ಸಾಲನ್ನೇ ನಿರ್ಮಿಸುವುದು ಸಾಧ್ಯವಾಯಿತು. ಒಂದು ಪ್ರತ್ಯೇಕ ಜೀವಕೋಶವನ್ನು ಪ್ರತ್ಯೇಕಿಸಿ ಜೀವಂತವಾಗಿರಿಸುವುದೇ ಕ್ಲೋನಿಂಗ್ ಮತ್ತು ಮಾನವ ಕೃತಕ ಫಲವಂತಿಕೆಯ ಮೂಲಭೂತ ತಂತ್ರವಾಗಿದೆ.

೪. ವಿಜ್ಞಾನಿಯೊಬ್ಬ ಆಕಸ್ಮಿಕವಾಗಿ ರಾಸಾಯನಿಕವೊಂದನ್ನು ಹೀಲಾ ಜೀವಕೋಶಗಳ ಮೇಲೆ ಚೆಲ್ಲಿದ. ಆ ರಾಸಾಯನಿಕ ಆ ಜೀವಕೋಶದಲ್ಲಿನ

ಸಿಕ್ಕುಸಿಕ್ಕಾಗಿದ್ದ ವರ್ಣತಂತುಗಳು ಬಿಡಿಬಿಡಿಯಾಗಿ ಪ್ರತ್ಯೇಕವಾಗುವಂತೆ ಮಾಡಿತು. ಅನಂತರ ವಿಜ್ಞಾನಿಗಳು ಈ ತಂತ್ರವನ್ನೇ ಬಳಸಿ ಮನುಷ್ಯರಲ್ಲಿ ೪೬ (೨೩ ಜೋಡಿಗಳು) ವರ್ಣತಂತುಗಳಿವೆ ೪೮ ಅಲ್ಲ ಎಂಬುದನ್ನು ಕಂಡುಕೊಂಡರು ಹಾಗೂ ಈ ತಂತ್ರವೇ ಹಲವಾರು ವಿಧದ ಅನುವಂಶಿಕ ರೋಗಗಳ ಪತ್ತೆಹಚ್ಚುವಿಕೆಗೆ ನೆರವಾಗುತ್ತಿದೆ.

೫. ಹೆನ್ರಿಟಾ ಲ್ಯಾಕ್ಸಳ ಕ್ಯಾನ್ಸರ್‌ಯುಕ್ತ ಜೀವಕೋಶಗಳು ಟಿಲೋಮೆರೇಸ್ ಎಂಬ ಕಿಣ್ವವನ್ನು ತಮ್ಮ ಡಿ.ಎನ್.ಎ ವನ್ನು ದುರಸ್ತಿಮಾಡಿಕೊಳ್ಳಲು ಬಳಸುತ್ತದೆ ಎಂಬುದನ್ನು ವಿಜ್ಞಾನಿಗಳು ಕಂಡುಕೊಂಡರು. ಇದರಿಂದಾಗಿಯೇ ಇತರ ಸಾಮಾನ್ಯ ಜೀವಕೋಶಗಳು ಸತ್ತುಹೋಗುತ್ತಿದ್ದಲ್ಲಿ, ಕ್ಯಾನ್ಸರ್‌ಯುಕ್ತ ಜೀವಕೋಶಗಳು ವೃದ್ಧಿಯಾಗುತ್ತಿದ್ದವು. ಕ್ಯಾನ್ಸರ್ ಪ್ರತಿರೋಧಕ ಔಷಧಗಳು ಈ ಕಿಣ್ವದ ವಿರುದ್ಧ ಕೆಲಸಮಾಡುತ್ತದೆ. ಹಾಗೂ ಆ ರೀತಿಯ ಹಲವಾರು ಔಷಧಗಳು ವೈದ್ಯಕೀಯ ಪ್ರಯೋಗದಲ್ಲಿದೆ.

ದೇಹದಲ್ಲಿನ ಪ್ರತಿಯೊಂದು ಜೀವಕೋಶವು ದ್ವಿಗುಣಗೊಂಡಂತೆ ಅವುಗಳಲ್ಲಿನ ವರ್ಣತಂತುಗಳ ತುದಿಯಲ್ಲಿರುವ ಟಿಲೋಮೇರೇಸ್ ಕಿಣ್ವ ಕಿರಿದಾಗುತ್ತಾ ಬರುತ್ತದೆ. ಮನುಷ್ಯರಿಗೆ ವಯಸ್ಸಾಗಿ ಕೊನೆಗೊಂದು ದಿನ ಅವರು ಜೀವ ಬಿಡುವುದಕ್ಕೂ ಇದೇ ಕಾರಣ. ದೇಹದಲ್ಲಿನ ಪ್ರತಿಯೊಂದು ಜೀವಕೋಶವೂ ಒಂದು ನಿರ್ದಿಷ್ಟ ಸಂಖ್ಯೆಯಷ್ಟು ಮಾತ್ರ ವಿಭಜನೆಗೊಳಗಾಗಬಲ್ಲದು ಹಾಗೂ ಇದನ್ನು 'ಹೇಫ್ಲಿಕ್ ಮಿತಿ' ಯೆಂದು ವಿಜ್ಞಾನಿಗಳು ಕರೆಯುತ್ತಾರೆ. ಆದರೆ ಹೀಲಾ ಜೀವಕೋಶಗಳು ಮಾತ್ರ ಈ ಮಿತಿಯನ್ನೂ ಮೀರಿ ನಿರಂತರವಾಗಿ ವಿಭಜನೆಗೊಳಗಾಗುತ್ತಿವೆ. ಅದಕ್ಕೆ ಕಾರಣ ಅವುಗಳ ವರ್ಣತಂತುಗಳ ಕೊನೆಯಲ್ಲಿ ಟಿಲೋಮೆರೇಸ್‌ನ ಸಕ್ರಿಯ ಆವೃತ್ತಿ ಹೊಂದಿರುವುದಾಗಿದೆ. ಇದರಿಂದಾಗಿ ಜೀವಕೋಶಗಳು ವಿಭಜನೆಗೊಂಡಾಗ ಟಿಲೋಮರೇಸ್ ಕಿರಿದಾಗುತ್ತಾ ಹೋಗುವುದಿಲ್ಲ. ಹೆನ್ರಿಟಾ ಬದುಕಿದ್ದ ಅವಧಿಗಿಂತ ಹೆಚ್ಚಿನ ಸಮಯ ಆಕೆಯ ಜೀವಕೋಶಗಳು ಬದುಕಿವೆ.

ಆದರೆ ಹೆನ್ರಿಟಾ ಲ್ಯಾಕ್ಸ್ ಕುಟುಂಬದವರಿಗೆ ವೈದ್ಯಕೀಯ ಜಗತ್ತಿನಲ್ಲಿ ತಮ್ಮ ತಾಯಿಯ ಕ್ಯಾನ್ಸರ್‌ಯುಕ್ತ ಜೀವಕೋಶಗಳು ನಡೆಸುತ್ತಿರುವ ಕ್ರಾಂತಿಯ ಅರಿವೇ ಇರಲಿಲ್ಲ. ಈ ವ್ಯವಹಾರದಲ್ಲಿ ಅವರಿಗೆ ಚಿಕ್ಕಾಸೂ ಸಿಗಲಿಲ್ಲ. ಅವರು ಅತ್ಯಂತ ಬಡತನದಲ್ಲಿ ಶಿಕ್ಷಣವಿಲ್ಲದೆ, ಆರೋಗ್ಯ ವಿಮೆಯಿಲ್ಲದೆ ನರಳುತ್ತಿದ್ದರು. ತಮ್ಮ ತಾಯಿ ಸತ್ತ ಇಪ್ಪತ್ತು ವರ್ಷಗಳ ನಂತರವೂ ಆಕೆಯ ಜೀವಕೋಶಗಳು ಇನ್ನೂ ಜೀವಂತವಿದೆ ಎಂಬ ವಿಷಯ ಅವರಿಗೆ ತಿಳಿದೇ ಇರಲಿಲ್ಲ. ಕೊನೆಗೆ ಆ ವಿಷಯ ತಿಳಿದದ್ದೂ ಆಕಸ್ಮಿಕವಾಗಿ, ಹೆನ್ರಿಟಾ ಲ್ಯಾಕ್ಸಳ ಸೊಸೆ ಒಮ್ಮೆ ನ್ಯಾಶನಲ್ ಕ್ಯಾನ್ಸರ್ ಇನ್‌ಸ್ಟಿಟ್ಯೂಟ್‌ಗೆ ಹೋಗಿದ್ದಾಗ ಆಕೆಯ

ಹೆಸರಿನಲ್ಲಿನ 'ಲ್ಯಾಕ್ಸ್'ಪದ ನೋಡಿದ ಅಲ್ಲಿನ ಸಂಶೋಧಕನೊಬ್ಬ ತಾನು 'ಹೆನ್ರಿಟಾ ಲ್ಯಾಕ್ಸ್' ಎಂಬ ಹೆಂಗಸಿನಿಂದ ಪಡೆದ ಜೀವಕೋಶಗಳ ಮೇಲೆ ಸಂಶೋಧನೆ ನಡೆಸುತ್ತಿರುವುದಾಗಿ ತಿಳಿಸಿದ. ಲ್ಯಾಕ್ಸ್ ಕುಟುಂಬದ ಬಗೆಗೆ ಹೊರಜಗತ್ತಿಗೆ ತಿಳಿದ ನಂತರ ಹಲವಾರು ವೈದ್ಯರು, ವಿಜ್ಞಾನಿಗಳು ಹೀಲಾ ಜೀವಕೋಶಗಳ ಬಗ್ಗೆ ಹೆಚ್ಚಿಗೆ ತಿಳಿದುಕೊಳ್ಳಲು ಆ ಕುಟುಂಬದವರನ್ನು ಸಹ ಬೇರೇನೋ ನೆಪ ಹೇಳಿ ಪ್ರಯೋಗಾಲಯಗಳಿಗೆ ಕರೆಸಿ ಪರೀಕ್ಷೆಗಳನ್ನು ನಡೆಸತೊಡಗಿದರು.

ಕಳೆದ ಅರವತ್ತು ವರ್ಷಗಳಿಂದ ಸತತವಾಗಿ ವೃದ್ಧಿಯಾಗುತ್ತಿರುವ ಹೀಲಾ ಜೀವಕೋಶಗಳಲ್ಲಿ ಉತ್ಪರಿವರ್ತನೆಯಾಗಿ (Mutation) ಅವು ಸ್ವಯಂ ಏಕಕೋಶಿಯ ಜೀವಿಗಳಾಗಿ ವಿಕಾಸ ಹೊಂದಿವೆ ಹಾಗೂ ಅವು ಈಗ ಮಾನವ ಜೀವಕೋಶಗಳಾಗಿಯೇ ಉಳಿದಿಲ್ಲ ಎನ್ನುವ ಗಾಳಿ ಸುದ್ದಿ ಸಹ ವಿಜ್ಞಾನ ಜಗತ್ತಿನಲ್ಲಿ ಹಬ್ಬಿತ್ತು. ಲೀ. ವ್ಯಾನ್ ವಾಲೆನ್ ಎಂಬ ವಿಜ್ಞಾನಿ ಹೀಲಾ ಜೀವಕೋಶಗಳು ಒಂದು ಹೊಸ ಪ್ರಭೇದವಾಗಿ ವಿಕಾಸಗೊಂಡಿವೆಯೆಂದು ಹೇಳಿ ಅದಕ್ಕೆ ಹೀಲಾಸೈಟಾನ್ ಗಾರ್ಟ್ಲೆರಿ ಎಂಬ ವೈಜ್ಞಾನಿಕ ಹೆಸರನ್ನು ಸಹ ಇರಿಸಿದ. ಆದರೆ ವಿಜ್ಞಾನಿಗಳು ಅದನ್ನು ಅಲ್ಲಗಳೆಯುತ್ತಾರೆ.

ಇಲ್ಲಿನ ವಿಪರ್ಯಾಸವೆಂದರೆ ನಮ್ಮದೇ ದೇಹದ ಜೀವಕೋಶಗಳ ಹಾಗೂ ಅಂಗಾಂಶಗಳ ಯಜಮಾನರು ನಾವು ಅಲ್ಲದಿರುವುದು ಅವು ನಮ್ಮ ದೇಹದಲ್ಲಿರುವವರೆಗೂ ಅವು ನಮ್ಮವು. ಆದರೆ ದೇಹದಿಂದ ಹೊರಗೆ ತೆಗೆದನಂತರ ಅವುಗಳ ಮೇಲೆ ನಮ್ಮ ಯಾವುದೇ ಹಕ್ಕಿಲ್ಲದಿರುವುದು. ೧೯೮೦ರಲ್ಲಿ ವೈದ್ಯನೊಬ್ಬ ಜಾನ್‌ಮೂರ್ ಎಂಬ ರೋಗಿಯ ದೇಹದಿಂದ ಕ್ಯಾನ್ಸರ್‌ಯುಕ್ತ ಗುಲ್ಮವನ್ನು ತೆಗೆದು ಅವುಗಳಿಂದ ಹೊಸ ಜೀವಕೋಶಗಳ ಸಾಲನ್ನು ಅಭಿವೃದ್ಧಿಪಡಿಸಿ ಜಾನ್ ಮೂರ್‌ನ ಅರಿವಿಗೇ ಬರದಂತೆ ಅದನ್ನು ಪೇಟೆಂಟ್ ಮಾಡಿದ. ಆ ಜೀವಕೋಶಗಳ ಮೌಲ್ಯ ಮೂರು ಬಿಲಿಯನ್ ಡಾಲರ್‌ಗಿಂತ ಹೆಚ್ಚಾಗಿತ್ತು. ಕೊನೆಗೆ ಈ ವಿಷಯ ತಿಳಿದ ಮೂರ್ ನಮ್ಮ ದೇಹದ ಅಂಗಾಂಶಗಳ ಮೇಲೆ ಅವರವರಿಗೆ ಹಕ್ಕಿರುತ್ತದೆಯೆಂದು ಹೇಳಿ ನ್ಯಾಯಾಲಯದಲ್ಲಿ ದಾವೆಯೊಂದನ್ನು ಹೂಡಿದ. ಮೊದಲ ನ್ಯಾಯಾಲಯದಲ್ಲಿ ತೀರ್ಪು ಆತನ ಕಡೆಗಿದ್ದರೂ ಕ್ಯಾಲಿಫೋರ್ನಿಯಾದ ಉಚ್ಚ ನ್ಯಾಯಾಲಯ ಈ ತೀರ್ಪನ್ನು ತಿರಸ್ಕರಿಸಿ, ಜೀವಕೋಶಗಳ ಸಾಲನ್ನು ವೈದ್ಯ ತನ್ನ 'ಸಾಮರ್ಥ್ಯ ಶ್ರಮ'ದಿಂದ 'ರೂಪಾಂತರಿಸಿದ್ದಾನೆ' ಎಂದೂ ಹಾಗೂ ದೇಹದಿಂದ ಹೊರತೆಗೆದ ಅಂಗಾಂಶ 'ಬರೆ ಒಂದು ವೈದ್ಯಕೀಯ ತ್ಯಾಜ್ಯ ವಸ್ತು'ವೆಂದು ಹೇಳಿ ಅದರ ಮೇಲೆ ಆ ರೋಗಿಗೆ ಯಾವುದೇ ಹಕ್ಕಿಲ್ಲವೆಂದು ತೀರ್ಪು ನೀಡಿತು. ಆದರೆ ನ್ಯಾಯಬದ್ಧವಾಗಿರುವುದೆಲ್ಲವೂ ನೈತಿಕವಾಗಿ ಬದ್ಧವಾಗಿರುವಂತಹುದೇ ಎಂಬ ಪ್ರಶ್ನೆ ಕಾಡದೇ ಇರುವುದಿಲ್ಲ.

ರೋಗಿಗಳು ಅಥವಾ ಅವರ ಕುಟುಂಬದವರ ಸಮ್ಮತಿಯಿಲ್ಲದೆ ತೆಗೆದ ಅಂಗಾಂ

ಅಥವಾ ರಕ್ತದ ಮಾದರಿಗಳನ್ನು ಸಂಗ್ರಹಿಸುತ್ತಿದ್ದ ಆಸ್ಪತ್ರೆಯ ಮೇಲೆ ಟೆಕ್ಸಾಸ್‌ನ ನಾಗರಿಕ ಹಕ್ಕುಗಳ ಪ್ರಾಯೋಜನೆಯು ದಾವೆ ಹೂಡಿ ಅದರಲ್ಲಿ ಗೆದ್ದಿತು ಸಹ. ನ್ಯಾಯಾಲಯದ ತೀರ್ಪಿನಂತೆ ಆ ರೀತಿ ಸಂಗ್ರಹಿಸಿದ್ದ ರಕ್ತದ ಮಾದರಿಗಳೆಲ್ಲವನ್ನೂ ನಾಶಪಡಿಸಲಾಯಿತು. ಹಾಗಾಗಿ ಈಗ ಆಸ್ಪತ್ರೆಗೆ ಸೇರುವಾಗಲೇ ಅರ್ಜಿಯಲ್ಲಿ ಆ ರೀತಿಯ ಸಮ್ಮತಿಗೆ ಸಹಿ ಪಡೆದಿರುತ್ತಾರೆ. ಆದರೆ ಅವುಗಳನ್ನು ಎಷ್ಟು ಜನ ಓದಿ ಸಮ್ಮತಿ ನೀಡಿರುತ್ತಾರೆ ಎಂಬುದು ಪ್ರಶ್ನಾರ್ಹ. ೧೯೫೦ರ ಸಮಯದಲ್ಲಿ ಜಾನ್ಸ್ ಹಾಪ್‌ಕಿನ್ಸ್ ಆಸ್ಪತ್ರೆಯ ವರ್ಣಭೇದ ತಾರತಮ್ಯ ಎಷ್ಟು ತೀವ್ರವಾಗಿರುತ್ತೆಂದರೆ (ಹೆನ್ರಿಟಾ ಕರಿಯರಿಗೆಂದೇ ಪ್ರತ್ಯೇಕವಾಗಿರಿಸಿದ ವಾರ್ಡ್‌ನಲ್ಲಿದ್ದಳು) ಅನುಮತಿ ಕೇಳಿದ್ದರೂ ಹೆನ್ರಿಟಾ ಬಹುಶಃ ತನ್ನ ಅಂಗಾಂಶ ನೀಡಲು ಸಮ್ಮತಿಸುತ್ತಿರಲಿಲ್ಲ ಎಂದು ಸ್ಕ್ಲೂಟ್ ಹೇಳುತ್ತಾರೆ.

ಈ ರೀತಿ ಪ್ರತಿಯೊಂದು ಮಾಹಿತಿ ನೀಡುತ್ತಾ, ಸಮ್ಮತಿ ಪಡೆಯುತ್ತಾ ಹೋದಲ್ಲಿ ಹಲವಾರು ಸಮಸ್ಯೆಗಳು ಎದುರಾಗುತ್ತವೆ, ಸಂಶೋಧನೆಗಳ ಪ್ರಗತಿ ಸಾಧ್ಯವಾಗುವುದಿಲ್ಲ ಎನ್ನುವುದು ಹಲವಾರು ಸಂಶೋಧಕರ ಅನಿಸಿಕೆ. ಆ ರೀತಿ ಹೆನ್ರಿಟಾಳ ಅನುಮತಿಗಾಗಿ ಕಾದು ನಿಂತಿದ್ದಲ್ಲಿ ಪೋಲಿಯೋ ಲಸಿಕೆ ಬರುವುದು ಇನ್ನಷ್ಟು ವರ್ಷಗಳು ತಡವಾಗುತ್ತಿತ್ತು ಎನ್ನುತ್ತಾರೆ ಅವರು. ಆದರೆ ಹೆನ್ರಿಟಾ ಲ್ಯಾಕ್ಸಳ ವಿಷಯದಲ್ಲಿ ಆಕೆಯ ಕುಟುಂಬದವರಿಗೆ ಹೀಲಾ ಜೀವಕೋಶಗಳ ವಿಷಯವೇ ತಿಳಿದಿರಲಿಲ್ಲ ಎಂಬುದು ಬಹಳ ಮುಖ್ಯವಾದುದು. ವೈಜ್ಞಾನಿಕ ಸಮುದಾಯ ಅವರನ್ನು ಕಡೆಗಣಿಸಿ ಸಂಶೋಧನೆಯ ಲಾಭಗಳನ್ನು ಬೃಹತ್ ಪ್ರಮಾಣದಲ್ಲಿ ಪಡೆದುಕೊಳ್ಳುತ್ತಿತ್ತು. ವಿಜ್ಞಾನ ಮತ್ತು ಸಂಶೋಧನೆಗಳು ಮುಕ್ತವಾಗಿರಬೇಕು ಹಾಗೂ ಪ್ರಾಮಾಣಿಕವಾಗಿರಬೇಕು ಎನ್ನುತ್ತಾರೆ ರೆಬೆಸ್ಕಾ ಸ್ಕ್ಲೂಟ್. ಹೆನ್ರಿಟಾಳ ಮಗಳಾದ ಡೆಬೊರಾ, 'ನಾನು ಸತ್ಯವನ್ನು ಹೇಳುತ್ತೇನೆ, ನನಗೆ ವಿಜ್ಞಾನದ ಬಗ್ಗೆ ಬೇಸರವಿಲ್ಲ, ಏಕೆಂದರೆ ಅದು ಜನರಿಗೆ ಸಹಾಯ ಮಾಡುತ್ತಿದೆ. ವಿಜ್ಞಾನವಿಲ್ಲದಿದ್ದಲ್ಲಿ ನನ್ನ ಬದುಕು ದುಸ್ತರವಾಗುತ್ತಿತ್ತು.... ಹಾಗೆಯೇ ನಾನು ಸುಳ್ಳನ್ನು ಸಹ ಹೇಳುವುದಿಲ್ಲ. ನನಗೆ ಆರೋಗ್ಯ ವಿಮೆಯೂ ಬೇಕು, ಏಕೆಂದರೆ ನನ್ನ ತಾಯಿಯ ಜೀವಕೋಶಗಳು ಯಾವ ಔಷಧಗಳನ್ನು ಕಂಡುಹಿಡಿಯಲು ಸಹಾಯಮಾಡಿದವೋ ಆ ಔಷಧಗಳನ್ನು ಕೊಳ್ಳಲು ನಾನು ಪ್ರತಿ ತಿಂಗಳು ಹಣವನ್ನು ಖರ್ಚುಮಾಡುವುದು ನನಗೆ ಕಷ್ಟಕರವಾಗುತ್ತದೆ' ಎಂದಿದ್ದಾಳೆ.

**ಹೀಲಾ ಜೀವಕೋಶದ ಮೇಲಿನ ಅಧ್ಯಯನಗಳು ಕೆಲವು ಮೈಲಿಗಲ್ಲುಗಳು :**

೧೯೫೧ : ಹೆನ್ರಿಟಾ ಲ್ಯಾಕ್ಸಳಿಂದ ಅವಳ ಅನುಮತಿಯಿಲ್ಲದೆ ಆಕೆಯ ಗರ್ಭಕೋಶದ ಕೊರಳಿನ ಕ್ಯಾನ್ಸರ್‌ಯುಕ್ತ ಅಂಗಾಂಶವನ್ನು ತೆಗೆದು ಅದನ್ನು ಪ್ರಯೋಗಾಲಯದಲ್ಲಿ ವೃದ್ಧಿಸಿ 'ಹೀಲಾ' ಜೀವಕೋಶಗಳನ್ನು ಅಭಿವೃದ್ಧಿಪಡಿಸಲಾಯಿತು.

೧೯೫೨: * ಸಂಶೋಧಕರು ತಮ್ಮ ಅಧ್ಯಯನಕ್ಕಾಗಿ ಹೀಲಾ ಜೀವಕೋಶಗಳಿಗೆ

ಕ್ಲೋನಿಂಗ್, ಜೀನ್, ಥೆರಪಿ, ಪ್ರನಾಳ ನಳಿಕೆ ಫಲವಂತಿಕೆ ಮತ್ತು ಸ್ಟೆಮ್ ಜೀವಕೋಶಗಳ ಪ್ರತ್ಯೇಕಿಸುವಿಕೆ ಸಾಧ್ಯವಾಗಿದೆ.

ಇದೇ ವರ್ಷ ಮೈಕ್ರೋಬಯಾಲಾಜಿಕಲ್ಸ್ ಅಸೋಸಿಯೇಟ್ಸ್ ಕಂಪೆನಿಯು ಹೀಲಾ ಜೀವಕೋಶಗಳನ್ನು ಬೃಹತ್ ಪ್ರಮಾಣದಲ್ಲಿ ತಯಾರಿಸಿ ಮಾರಾಟಮಾಡಲು ಪ್ರಾರಂಭಿಸಿತು.

೧೯೬೦: ಸೋವಿಯತ್ ಅಂತರಿಕ್ಷ ನೌಕೆಯಲ್ಲಿ ಹೀಲಾ ಜೀವಕೋಶಗಳು ಯಾವೊಬ್ಬ ಮಾನವನೂ ಅಂತರಿಕ್ಷಕ್ಕೆ ಕಾಲಿರಿಸುವ ಮೊದಲು ಮಾನವನ ಜೀವಕೋಶಗಳ ಮೇಲೆ ಶೂನ್ಯ ಗುರುತ್ವಾಕರ್ಷಣೆಯ ಪ್ರಭಾವದ ಅಧ್ಯಯನಕ್ಕಾಗಿ ಅಂತರಿರಿಕ್ಷಕ್ಕೆ ಹೋಗಿಬಂದವು. ಅದಾದ ನಂತರ ನ್ಯಾಸಾ ಸಹ ತನ್ನ ಮೊಟ್ಟಮೊದಲ ಮಾನವ ಅಂತರಿಕ್ಷ ಯಾನದಲ್ಲಿ ಹೀಲಾ ಜೀವಕೋಶಗಳನ್ನೂ ಸೇರಿಸಿದ್ದರು ಹಾಗೂ ಅಂತರಿಕ್ಷದಲ್ಲಿ ಕ್ಯಾನ್ಸರ್ ಜೀವಕೋಶಗಳು ವೇಗವಾಗಿ ವೃದ್ಧಿಸುತ್ತವೆ ಎಂಬುದನ್ನು ಕಂಡುಕೊಂಡರು.

೧೯೬೫ : ಹೀಲಾ ಜೀವಕೋಶಗಳನ್ನು ಇಲಿಯ ಜೀವಕೋಶಗಳೊಂದಿಗೆ ಸಂಯೋಜಿಸಿ ಮೊಟ್ಟಮೊದಲ ಅಂತರ ಪ್ರಭೇದ ಹೈಬ್ರಿಡ್ ನಿರ್ಮಿಸಲಾಯಿತು. ಇದರಿಂದಾಗಿ ಮಾನವ ವಂಶವಾಹಿಗಳ ಮ್ಯಾಪಿಂಗ್ ಸಾಧ್ಯವಾಗಿದೆ. ಇದರ ಪರಿಣಾಮವಾಗಿ ರಕ್ತದ ವಿಧದ ಗುರುತಿಸುವಿಕೆ, ಕ್ಯಾನ್ಸರ್ ಔಷಧ ಹರ್ಸೆಪ್ಟಿನ್‌ನ ಅಭಿವೃದ್ಧಿ ಸಾಧ್ಯವಾಯಿತು.

೧೯೬೬: ಕ್ಯಾನ್ಸರ್ ಹೇಗೆ ಹರಡುತ್ತದೆಂಬುದನ್ನು ಪರೀಕ್ಷಿಸಲು ವಿಜ್ಞಾನಿಯೊಬ್ಬ ಹಲವಾರು ವ್ಯಕ್ತಿಗಳಿಗೆ ಅವರಿಗೆ ತಿಳಿಸದೆಯೇ ಹೀಲಾ ಜೀವಕೋಶಗಳ ಚುಚ್ಚುಮದ್ದನ್ನು ನೀಡಿದ ನಂತರ ರಾಷ್ಟ್ರಮಟ್ಟದ ತನಿಖೆ ನಡೆದು ಅದಾದನಂತರ ವೈದ್ಯಕೀಯ ಪರಿಶೀಲನಾ ಮಂಡಳಿಗಳು ಸ್ಥಾಪನೆಗೊಂಡವು ಹಾಗೂ ರೋಗಿಗಳಿಂದ ಸಮ್ಮತಿ ಪಡೆಯುವ ಪದ್ಧತಿ ಜಾರಿಗೆ ಬಂದಿತು.

೧೯೭೩: ರೋಗಕಾರಕ ಸಾಲ್ಮೊನೆಲ್ಲಾ ಸೂಕ್ಷ್ಮಜೀವಿಯ ಸೋಂಕುಕಾರಕತೆ ಮತ್ತು ಮಾನವ ಜೀವಕೋಶದೊಳಗಿನ ಅವುಗಳ ನಡತೆಯ ಬಗ್ಗೆ ಅಧ್ಯಯನಕ್ಕೆ ಹೀಲಾ ಜೀವಕೋಶಗಳನ್ನು ಬಳಸಲಾಯಿತು.

೧೯೭೪: ಮಾನವ ಪ್ಯಾಪಿಲ್ಲೋಮ ವೈರಸ್ ಉಂಟುಮಾಡುತ್ತವೆ ಎನ್ನುವುದು ರುಜುವಾತು ಮಾಡಲು ಜರ್ಮನ್ ವಿಜ್ಞಾನಿಯೊಬ್ಬ ಹೀಲಾ ಜೀವಕೋಶಗಳನ್ನು ಬಳಸಿಕೊಂಡರು. ಅವರ ಈ ಆವಿಷ್ಕಾರಕ್ಕಾಗಿ ಅವರಿಗೆ ನೋಬೆಲ್ ಬಹುಮಾನ ಲಭಿಸಿತು. ಅನಂತರ ಮಾನವ ಪ್ಯಾಪಿಲ್ಲೋಮ ವೈರಸ್ ಲಸಿಕೆಯನ್ನು ಕಂಡು ಹಿಡಿಯಲಾಯಿತು.

ಕಾವ್ಯ

# ...ೀರ್ಘ ಮೌನದ ಬಳಿಕ ನಿನ್ನೊಡನೆ ಮಾತನಾಡುತ್ತಿರುವೆ

ಪೋಲಿಷ್ ಮೂಲ : ಸೆಸ್ಲಾ ಮಿ ಲೊಜಾ
ಇಂಗ್ಲೀಷ್ – ಶಿವರಾಮಕೃಷ್ಣನ್
ಕನ್ನಡ – ಮೀನಾ ಮೈಸೂರು

ಅಖಂಡ ಮೌನ ಮುರಿದು, ಮಗುವೇ ನಿನ್ನೊಂದಿಗೆ ಮಾತನಾಡುತ್ತಿರುವೆ
ವೆರೋನ ಇನ್ನಿಲ್ಲ
ಪೂರ್ವಿಕರ ನಗರಗಳ ಇಟ್ಟಿಗೆ ಪುಡಿಯಾಗಿ ಹಿಸಿಯುತ್ತಿದೆ ನನ್ನ ಕೈ ಬೆರಳುಗಳಲ್ಲಿ
ಶ್ರೇಷ್ಠ ಪ್ರೀತಿಯ ಕೊನೆಯೂ ಇಷ್ಟೆ!

ಮಗುವೇ, ಉದ್ಯಾನವನದಲ್ಲಿ ನಿನ್ನ ನಗುವ ಕೇಳುತ್ತಿರುವೆ
ತೋಯ್ದ ಎಲೆಗಳಿಂದ ವಸಂತದ ಹುಚ್ಚು ಸುಗಂಧ ನನ್ನೆಡೆಗೆ ಬರುತ್ತಿದೆ
ನನ್ನೆಡೆಗೆ, ರಕ್ಷಕ ಶಕ್ತಿಯಲ್ಲಿ ನಂಬಿಕೆಯಿರದ ನನ್ನೆಡೆಗೆ!
ಅನ್ಯರನ್ನಿರಲಿ, ನನ್ನನ್ನೇ ನಾನು ರಕ್ಷಿಸಿಕೊಳ್ಳಲಾಗದ ನನ್ನೆಡೆಗೆ!

ಇರುಳ ನಿದ್ದೆಯಲ್ಲಿ ಎಚ್ಚರವಾದಾಗ
ಪ್ರಾರಂಭವಾಗುವ ಪ್ರಶ್ನೆಗಳು ಕೇಳುತ್ತವೆ
ಢವಗುಟ್ಟುವ ಎದೆಯ ಮಿಡಿತ ಆಲಿಸು
ಅದಕ್ಕಿಂತ ಹೆಚ್ಚಿನದ್ದೇನನ್ನು ಬಯಸುವೆ
ಮತ್ತೇನು ನಿನ್ನ ಆಸೆ? ಏಕೆ ಅತೃಪ್ತಿ
ಇದು ಕೋಗಿಲೆ ಹಾಡುವ ವಸಂತ ಕಾಲ

ತೋಟದಲ್ಲಿ ಮಗುವಿನ ಕೇಕೆ
ಹೂವರಳದ ಬೋಳು ಬೆಟ್ಟದ ಮೇಲೆ
ಮೊದಲ ನಿಚ್ಚಳ ನಕ್ಷತ್ರ ಮೂಡಿದಂತೆ
ಮತ್ತೆ ಸುಮಧುರ ಗೀತೆ ನನ್ನ ತುಟಿಗೆ ಹಿಂದಿರುಗುತ್ತಿದೆ
ಈ ಮುಪ್ಪಲ್ಲೂ ಮತ್ತೆ ಯೌವ್ವನ ಮರುಕಳಿಸುತ್ತಿದೆ
ನಾನು ವೆರೋನಾದಲ್ಲಿದ್ದಂತೆ!

ತಿರಸ್ಕರಿಸು, ತಿರಸ್ಕರಿಸು. ಎಲ್ಲವನ್ನೂ ಇದು ಇದಲ್ಲ

ಇವನ್ನು ನಾನು ಪುನಃ ಸೃಷ್ಟಿಸಲಾರೆ. ಅಥವಾ ಹಿಂದಿರುಗಿಸಲೂ ಆರೆ.
ಮಲಗಿ, ರೋಮಿಯೋ ಜೂಲಿಯೆಟ್
ಮುರಿದ ಗರಿಯ ಹಾಸಿಗೆಯ ಮೇಲೆ
ಹೆಣೆದು ಕೊಂಡಿರುವ ನಿಮ್ಮ ಕೈಗಳನ್ನು,
ಬೂದಿಯೊಳಗಿಂದ ಮೇಲೆತ್ತಲಾರೆ
ಬೇಕಾದರೆ ಬೆಕ್ಕು ಪಾಳುದೇಗುಲದಲ್ಲಿ ಭೇಟಿಯಾಡಲಿ
ವೇದಿಕೆಯ ಮೇಲದರ ಕಣ್ಣುಗಳು ಬೆಳಗಲಿ
ಸ್ತಬ್ಧ ಸಮಾಧಿಯ ಕಮಾನಿನ ಮೇಲೆ
ಬೇಕಾದರೆ ಗೂಬೆ ಗೂಡು ಕಟ್ಟಲಿ
ಧಗಧಗಿಸುತ್ತಿರುವ ಹಗಲಿನಲ್ಲಿ ಅವಶೇಷಗಳ ನಡುವೆ
ಹಳದಿ ಹುಲ್ಲಿನ ಮೇಲೆ, ಬೇಕಾದರೆ ಹಾವು
ಬಿಸಿಲು ಕಾಯಿಸಿಕೊಳ್ಳಲಿ ಮೌನವಾಗಿ
ಒಲ್ಲದ ಹೊಳೆವ ಚಿನ್ನದ ಸುರಳಿಯನ್ನು ಆಲಿಂಗಿಸಿಕೊಳ್ಳಲಿ !

ಯೌವ್ವನ  ವಸಂತಗಳು ಕಳೆದು ಹೋದ ಮೇಲೆ
ತುಟಿಯ ರಂಗೂ ಕಾಣೆಯಾದ ಮೇಲೆ
ಧಗೆಯ ರಾತ್ರಿಯಲ್ಲಿ ಭಾವೋದ್ರೇಕ ಹರಿದು ಹೋದ ಮೇಲೆ
ಉಳಿದದ್ದೇನೆಂದು ತಿಳಿಯುವವರೆಗೂ ನಾನು ಹಿಂದಿರುಗಲಾರೆ

ಸಂಗೀತ ಮತ್ತು ಮದಿರೆಯ ಸವಿಯ ತ್ಯಜಿಸಿದ ಮೇಲೆ
ಭರವಸೆ ಮತ್ತು ಶೋಕ, ಮತ್ತೆ ಕಾರ್ಗತ್ತಲು
ಮತ್ತೆ ಕಡಲ ಹಕ್ಕಿಯ ಚೀತ್ಕಾರ
ಅಪರಾಹ್ಣೆಗೆ ಕಾಳ ಸೂರ್ಯನ ಮುಗಿವ ಬೆಳಕು

ಕಾದ ಚಾಕುವಿನಿಂದ ಹೋಳಾದ
ಸೇಬಿನೊಳಗೆ ಯಾವ ಬೀಜ ಉಳಿಯಲು ಸಾಧ್ಯ?
ಅಂತೆಯೇ ಬದುಕು

ನನ್ನ ಮಗನೇ ನಂಬು ನನ್ನ ಏನೂ ಉಳಿದಿಲ್ಲ
ಮನುಷ್ಯ ಆಡುವ ಬೊಂಬೆ ಬಿಡಿಯ ಮುಂದೆ
ಹಣೆ ಬರಹದಂತೆ ಅದೃಷ್ಟ

ಬರೀ ಆಟ
ಮತ್ತೇನಿಲ್ಲ !

# ರೂಪ ಹಾಸನ ಅವರ ಐದು ಕವನಗಳು

## ಕಾರದಾಕಾರದಾಚೆ

೧

ಕಣ್ಣಿಗೆ ಕಾಣದಂತೆ ನಿಟ್ಟುಸಿರಿಡುತ್ತಾ
ಒಳಗೇ ಗೂಢವಾಗಿ
ಕುದಿಯುತ್ತಿದ್ದ ಮಜ್ಜಿಗೆಹುಳಿ
ತಟ್ಟನೆ ಉಕ್ಕಿ ಸುರಿಯುತ್ತದೆ
ಒಳಗಿನ ಕುದಿ
ಉಕ್ಕಿದಾಗಲೇ ಗೊತ್ತು

೨

ಕಾದು ನಿಂತಿದ್ದ
ಕಾವಲಿಗೆ ಪಾಪದ ಹಸಿಹಿಟ್ಟು
ಬಿದ್ದೊಡನೆ ಹದಬೆಂದು
ಗರಿಗುಡುತ್ತದೆ ದೋಸೆ
ನಿರಾಕಾರದ ಹಿಟ್ಟು ಹರಡಿ
ದೋಸೆಯಾಕಾರ

೩

ಸುಡುವ ಬಾಣಲೆಗೆ
ಬಿದ್ದ ಬಿಡಿ ಕಾಳು
ಚಟಪಟ ಚಟಪಟ
ಸಿಡಿದು ಬಿರಿಯಲು ಅರಳು
ಬಾಣಲೆಯೆದುರು ಮೂಕ ಕಾಳಿಗೆ
ಅದೆಷ್ಟೊಂದು ಛಂದ ಧೈರ್ಯ

೪

ಮೂರು ದಿನಗಟ್ಟಲೆ ನೆನೆಸಿ
ಬಸಿದು ಸೆರಗಲ್ಲೇ ಒಣಗಿಸಿ ಕಟ್ಟಿ
ಮತ್ತೆ ಬಟ್ಟೆಯಲ್ಲಿ ಕೂಡಿ ಕೂಡಿ

ಕುಂಕುಮ ಸುಣುಪಿನ ಸರಿಹಿಟ್ಟು ತಯಾರು
ಪಕ್ವತೆಯ ಮಹಾಬಿಂದುವಿಗಾಗಿ
ಮತ್ತೆ ಮತ್ತೆ ಪರೀಕ್ಷೆ, ಸಿದ್ಧತೆ

೫

ಅಕ್ಕಿ ಉದ್ದುಗಳ
ಕ್ರಮವರಿತು ಬೆರೆಸಿ ತಿರುವಿ
ಮುಚ್ಚಿಟ್ಟ ಇಡ್ಲಿ ಹಿಟ್ಟು
ಹುದುಗಾಗಿ ಉಬ್ಬಿನಿಲ್ಲುತ್ತದೆ
ತಾಕತ್ತು ಅಕ್ಕಿ ಉದ್ದಿನದಲ್ಲ
ಎರಡು ಒಂದಾದ ಆ ಕ್ಷಣದ್ದು

೬

ಉಗುರು ಬೆಚ್ಚಗಿನ
ಹಾಲಿಗಿಷ್ಟೇ ಹೆಪ್ಪು ಹನುಕಿಸಿದ್ದು
ರಾತ್ರಿಯೆಲ್ಲಾ ಎಂಥದೋ ಮಸಲತ್ತು
ಬೆಳಗಿಗಾಗಲೇ ಹಾಲೇ ಮೊಸರು
ಮೇಲೆ ಸಾಭ್ಯಸ್ಥ ಗಟ್ಟಿಕೆನೆ
ಮಡುಗಟ್ಟಿದ ಹುಳಿ ಒಡಲಾಳದಲ್ಲಿ

೭

ಅವ್ಯಕ್ತದಾಚೆಯಿಂದ
ವ್ಯಕ್ತದೀಚೆಗೆ ಸೇರುವ ತುಡಿತ
ಕ್ರಿಯೆಯೊತ್ತಡದ ಪ್ರತಿಕ್ರಿಯೆ
ಹೊರಗು ಒಳಗಾಗಿ ಮಾಗಿ
ಒಳಗು ಹೊರಗಾಗಲೇ ಬೇಕಾದ ತುರ್ತು
ಒಳ ಹೊರಗಿನ ಸಮೀಕರಣ
ಆಕಾರ ನಿರಾಕಾರಗಳ ವ್ಯಾಕರಣ.

## ೨. ಆವಿರ್ಭಾವ

ಅದು ಬಳ್ಳಿಯಂತೆ
ಕಾಲಿಗೆ ತೊಡರುತ್ತಾ
ಭಯದಂತೆ
ಎದೆಯೊತ್ತಿ ಉಸಿರುಗಟ್ಟಿಸುತ್ತಾ

ಅತ್ತ ತಿರುಗಿದರೆ ಅತ್ತ
ಇತ್ತ ತಿರುಗಿದರೆ ಇತ್ತ
ಎತ್ತಲೆತ್ತಲೂ ಬೆಂಬತ್ತುತ್ತಿತ್ತು.
ಕೂರಲೂ ನಿಲ್ಲಲೂ ಬಿಡದೇ
ಹಠ ಹಿಡಿದ ಮಗುವಿನಂತೆ
ಜೀವ ಹಿಂಡುತ್ತಿತ್ತು
ಪ್ರೀತಿಯಿಂದ ಮೃದುವಾಗಿ
ಕಾತರದಿಂದ ರೂಕ್ಷವಾಗಿ ತಬ್ಬುತ್ತಿತ್ತು
ಇಂಚಿಂಚೂ ವ್ಯಾಪಿಸುತ್ತಾ
ಜ್ವಾಲೆಯಂತೆ ಹಬ್ಬುತ್ತಿತ್ತು

ಅವಳು......
ಆ ನೋವನ್ನು
ಪ್ರೀತಿಯಿಂದ ಅಪ್ರೋಷಿಸಿಬಿಟ್ಟಳು!

ಅದು ರಕ್ತದ ಕಣಕಣದಲ್ಲೂ
ಸೇರಿಹೋಯಿತು
ಕಣ್ಣಿನೊಳಗಿನ ನೋಟದಂತೆ

ಆ ನೋವು
ಒಳಗೇ ಅದಮ್ಯವಾಗಿ ಹಬ್ಬಿ
ಆವರಿಸಿತು ಆಗಮ್ಯ ಪ್ರೀತಿಯಂತೆ

ಈಗ ಅವಳು
ನದಿಯಂತೆ ಹಾಡುತ್ತ
ಜಲಪಾತದಂತೆ ನರ್ತಿಸುತ್ತಾ

ಸಮುದ್ರದಂತೆ ಘೋರ್ಗರೆಯುತ್ತಾ
ಪರ್ವತದಂತೆ ದಿಟ್ಟ ನಿಲ್ಲುತ್ತಾಳೆ

ಗುಹೆಯಂತೆ ಗುಪ್ತ
ಗಾಳಿಯಂತೆ ಅಗೋಚರ
ಮೋಡದಂತೆ ಹಗುರ
ಆಕಾಶದಂತೆ ಅವಿನಾಶಿ
ಸೃಷ್ಟಿಯಂತೆ ನಿರಂತರ

ಅವಳೊಳಗೆ
ನೋವು ಬೀಜವಾಗಿ ಊರಿ
ಮೆಲ್ಲಗೆ ಮೊಳಕೆಯೊಡೆದು
ನರನರಗಳನ್ನೂ ಬಳ್ಳಿಯಂತೆ
ಹೆಣೆದು ಬೀಗುವಾಗ
ಅವಳು ಫಲತುಂಬಿ
ಆವಿರ್ಭವಿಸಿ ತೊನೆಯುತ್ತಾಳೆ

ಪತಮಾರಿ ಕಂದನಿಗೆ ಉಣಿಸುತ್ತಾಳೆ
ಮಡಿಲೊಳಗಿಟ್ಟು ಆಡಿಸುತ್ತಾಳೆ
ಅರಿವೇ ಇಲ್ಲದೇ
ಅವಳೀಗ ತಾಯಾಗಿದ್ದಾಳೆ !

## ೨. ರೂಢಿ

೧

ಗುಂಡುಸೂಜಿ ತುಂಬಿಕೊಂಡ
ಆ ಡಬ್ಬಿಯೊಡಲು
ಸದಾ ಕಿಲಕಿಲ ನಗು

ಥಳಥಳ ಹೊಳೆವ ಆ
ಲೋಹದ ಚೂರುಗಳ
ಮಡಿಲಿಗೆ ಕೈ ಹಾಕಿ
ಯಾವುದೋ ಒಂದನ್ನು
ಅನಾಮತ್ತು ಎತ್ತಿದಾಗೊಮ್ಮೆ
ಅದೃಷ್ಟ ಕೈಕೊಟ್ಟು
ಮೊನೆಮುರುಕ
ಗುಂಡುಸೂಜಿ ಕೈಗೆ.

ಆ ದಾರಿಯಲ್ಲೇ ಅದನೊಗೆದು
ಮತ್ತೊಂದು ಮೊನೆಯುಳ್ಳ ಸೂಜಿ
ಹುಡುಕಿ ತೆಗೆವ ಆಟ ಪ್ರತಿಬಾರಿ
ಅವರನ್ನ ಬಿಟ್ಟು ಇವರನ್ನ ಬಿಟ್ಟು
ಇವರ್ಯಾರು?

೨

ಮತ್ತಿನ್ಯಾವಾಗಲೋ ಅವಸರದಲಿ
ಪೆಟ್ಟಿಯೊಡಲಿಗೆ ಕೈ ಹಾಕಿದರೆ
ಗ್ರಹಚಾರ ಕೆಟ್ಟು
ಅದೆಯೋ? ಮತ್ತೊಂದೋ?
ಅಪೂರ್ಣ ತುದಿಮುರುಕ
ಲೋಹದ ತುಂಡು ಕೈಗೆ
ಅವರನ್ನು ಬಿಟ್ಟು ಇವರನ್ನು ಬಿಟ್ಟು
ಇವರೂ ಅವರೇ

೩

ಎಲ್ಲ ಮೊನೆಮುರುಕ
ಗುಂಡುಸೂಜಿಗಳ ಹುಡುಕಿ
ಯಾಕಾಚೆ ಒಗೆಯಲಿಲ್ಲ?

ಅಪೂರ್ಣತೆ ಅಕ್ಷಮ್ಯವಲ್ಲ
ಪೂರ್ಣತೆಯೂ ಪರಿಪೂರ್ಣವಲ್ಲ

ಇರಲಿ
ಸೂಕ್ಷ್ಮ ಮೊನೆಯುಳ್ಳ
ಸೂಜಿಗಳೊಂದಿಗೇ ಇವೂ ಸಹ
ಎಂದಾದರೊಮ್ಮೆ ಕಲ್ಲು ಚಿಗುರುವಂತೆ
ಈ ಮುರುಕು
ಲೋಹದ ತುಂಡಿಗೂ ಜೀವ ಬಂದು
ತುದಿ ಮೂಡಿಬಿಡಬಹುದು.
ಮೂಡದಿದ್ದರೇನು?
ಅದರೊಂದಿಗೆ ಇದು
ಇದರೊಂದಿಗೆ ಅದು
ಹೀಗೆ...... ಹೇಗೋ ಇರುವುದು
ರೂಢಿಯಾಗಿಬಿಡಬಹುದು
ಇವೆ, ಇರುತ್ತವೆ.

## ೪. ಜೀವ ಸಂತೆ

೧

ಅಲ್ಲಿ ಗಾಢ ವಾಸನೆಯ
ಸತ್ತ ಒಣಕಲು ಮೀನು
ಕತ್ತರಿಸಿದ ಹೊಗೆಸೊಪ್ಪಿನ
ಮುರುಕಲು ತುಂಡು
ಸುಟ್ಟ ಸುಣ್ಣದ ಕಲ್ಲು
ತುಂಡರಿಸಿ ಬಿದ್ದ
ಒಣ ಅಡಿಕೆ ಚೂರು
ಬೆಳ್ಳಾನೆ ಬೆಳ್ಳ
ಬಿಡಿ ಕಲ್ಲುಪ್ಪು
ಗರಗುಡುತಿರುವ
ಒಣ ಮೆಣಸು
ಜಜ್ಜಿ ಬೀಜ
ಬೇರ್ಪಡಿಸಿದ ಹುಣಸೆ
ಬಿಕರಿಗೆ ಬಿದ್ದಿವೆ ಸತ್ತು.

ಈ ಜೀವಂತ ನೆಲದ ಮೇಲೆ
ಸಂತೆ ಎಂಬೋ ಶುಷ್ಕ ವ್ಯಾಪಾರ

೨

ಇದರೊಂದಿಗೇ ಸದ್ದಿಲ್ಲದೇ
ಅಲ್ಲಿ ಈಗಷ್ಟೇ
ಹಿಡಿದು ತಂದ
ಮೀನಿನ ಜೀವದ ಮಿಡಿತ
ಆಗಷ್ಟೇ ಕಿತ್ತು ತಂದ
ಹಸಿ ಹಸಿ ಸೊಪ್ಪಿನ ಉಸಿರಾಟ
ಮನೆಯಿಂದಲೇ ಮೊಳಕೆಯೊಡೆಸಿ
ತಂದ ಕಾಳುಗಳ ಮರು ಮೊಳೆತ
ಕಟ್ಟಿಟ್ಟ ಮಾಲೆಯ ಮೊಗ್ಗು
ಯಾರ ಅಂಕೆಯಿಲ್ಲದೇ ಅರಳುವ
ಸಹಜ ಜೀವ ಸಂಭ್ರಮ

೩

ನೀರಸ ಕೊಳುವ ಕೊಡುವ
ವ್ಯವಹಾರದ ಮಧ್ಯೆಯೂ
ಮೌನದಲಿ ನಡೆದೇ ಇದೆ
ಜೀವ ವ್ಯಾಪಾರ
ಅವನಿ ಪಲ್ಲವಿಸುತ್ತಲೇ ಇದ್ದಾಳೆ
ನಿರಂತರ ಜೀವಂತ

## ೪. ಸಹಜ ಧ್ಯಾನ

ಹೂಕೋಸಿಗೆ ರೂಪ ಬಣ್ಣದಲಿ
ಮನ ಲೀನ, ಮಲಿನ
ಹೆಚ್ಚುತ್ತಾ ಮೆಚ್ಚುತ್ತಾ ಅದರ
ಬುಡದಲ್ಲೇ ಹರಿವ
ಪಿತಿಪಿತಿ ಹುಳು
ಕಂಡರೂ ಕಾಣದಂತೆ
ಚೆಲುವಿನಾರಾಧನಾ ಧ್ಯಾನ
ಪೀಠಸ್ಥ ಆದೇಶಕ್ಕೆ ಮಹಾಮೌನ

ದಂಟು ಬೇಳೆ ಬೇಯಿಸಿ ಬಸಿದು
ಮೆಣಸು ಮಸಾಲೆ ಖಾರ
ಹದ ಬೆರೆಸಿ ಕುದಿಸಿ ಒಗ್ಗರಿಸಿ
ಬಸ್ಸಾರಿನ ರಸಗಂಧವ
ಆಘ್ರಾಣಿಸಿ ಹೀರಿ
ಕರುಳಿನಾಳದ ಬಾಯ್ಚಪ್ಪರಿಕೆ
ಮಹಾರಸದುನ್ಮಾದ ಧ್ಯಾನ
ಅಮಲಿನಲಿ ಮೈಮರೆವು
ಹೊರಳು ದಾರಿಯಲಿ ತಿಳಿವು

ಬೆಳ್ಳುಳ್ಳಿ ಒಗ್ಗರಣೆ ಘಮ ಮೂಗಿಗಡರಿ
ಆ ಗಂಧದ ಬೆನ್ನು ಹಿಡಿದು
ಗಾಳಿಯಲೆಗಳ ಮೇಲೆ ಸವಾರಿ
ಬೀಸಿ ಕೆಡವುತ್ತದೆ ವಾಸನಾ ಧ್ಯಾನ
ತಪ್ಪುತ್ತದೆ ಪ್ರಭುತ್ವ ನಿರ್ದೇಶಿತ ದಾರಿ
ನಡೆದ ದಾರಿಯೇ ಸರಿ

ಸಬ್ಬಸಿಗೆ ಸೊಪ್ಪಿನ
ವಿನ್ಯಾಸಕ್ಕೆ ಮೃದುಸ್ಪರ್ಶಕ್ಕೆ
ಅದೆಂಥಾ ನವುರು ಮುದ.
ಮೃದುವಾಗಿ ಮುಟ್ಟುತ್ತಾ
ಆವರಿಸುವ ಆವಾಹಿಸುವ
ಹಿತವಾದ ಮಿದಿತ
ಕಾಡುತ್ತದೆ ಅದೇ
ಸ್ಪರ್ಶಸುಖದ ಧ್ಯಾನ
ಅನುಭವಕ್ಕೇ ಬದ್ಧ ಮನ.
ಹೆಜ್ಜಲು ಕೈಗೆತ್ತಿಕೊಂಡ
ಈರುಳ್ಳಿಯ ಮೂಲ ಕಾಡಿ
ಪಕಳೆ ಪಕಳೆಗಳ ಬಿಡಿಸುತ್ತಾ ಹೋದಂತೆ
ಅದರಲ್ಲೇ ತಲ್ಲೀನ
ಆ ಕೌತುಕಕ್ಕೇ ಸೋತು
ಅವರಿಸುತ್ತದೆ ವಿಸ್ಮಿತ ಧ್ಯಾನ
ಅಳಿಸಿಹೋಗುತ್ತದೆ ಯಾರೋ ಬರೆದಿಟ್ಟ
ಅಲೌಕಿಕ ದಿವ್ಯ ಪುರಾಣ

ಈ ನಿತ್ಯ ಪ್ರೀತಿಯ
ಕಾಯಕ ಸಂತೆಯಲ್ಲಿ
ರೂಪ ರಸ ಗಂಧ ಸ್ಪರ್ಶ ವಿಸ್ಮಯಗಳ
ಮಾನುಷ ಸಹಜ ಧ್ಯಾನ
ಅನುಕ್ಷಣದ ಎಚ್ಚರ
ಮತ್ತೆ ಮತ್ತೆ ಮೈಮರೆವಿನ
ಹುಚ್ಚು ಮೋಹದ ಜೂಟಾಟ
ನಿಲುಕಲಾರದ ಎತ್ತರದಲೆ ಇರಲಿ ಬಿಡು
ಅವರಿಟ್ಟ ಸಂತ ಪೀಠ
ನನಗಾಗಿ ಅಮರವಾಗಲಿ
ಈ ನೆಲದಲ್ಲೇ ಹೀಗೆ ಈ ಕ್ಷಣ
ಕರೆಯುವೆ ಇದನ್ನೇ ಸಹಜ ಧ್ಯಾನ.



# ಡಾ. ವೀಣಾ ಶಾಂತೇಶ್ವರ ಅವರೊಂದಿಗೆ ಸಂದರ್ಶನ

*-ಡಾ. ಗಂಗಾಸ್ವಾಮಿ*

ಗಂಗಾ : ಮೇಡಂ ಅವರೇ ೨೦೧೦ರ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾದ ನಿಮಗೆ ಅಭಿನಂದನೆಗಳು ೧. ೧೯೬೮ರಲ್ಲಿ ನಿಮ್ಮ ಮೊದಲ ಸಂಕಲನ 'ಮುಳ್ಳುಗಳು' ಪ್ರಕಟವಾಯಿತು. ಆದರೆ ನೀವು ಬಿ.ಎ. ಓದುತ್ತಿರುವಾಗಲೇ 'ನೆನಪು ಬರೀ ನೆನಪು' ಕಥೆಯನ್ನು ಬರೆದಿದ್ದೀರಿ. ಅದು ಸಂಕ್ರಮಣ, ಕಸ್ತೂರಿಯಲ್ಲಿ ಪ್ರಕಟಗೊಂಡು ರಾಜಲಕ್ಷ್ಮೀ ಎನ್. ರಾವ್ ನಂತರ ನಿಮ್ಮದೇ ನವ್ಯದ ಸ್ತ್ರೀ ಧ್ವನಿ ಎಂದು ವಿಮರ್ಶೆ ಗುರುತಿಸಿತು. ನಿಮ್ಮ ಬರವಣಿಗೆಯ ಪ್ರಾರಂಭದ ದಿನಗಳನ್ನು ಹೇಳುತ್ತೀರಾ?

ವೀಣಾ : ಧನ್ಯವಾದಗಳು. ನಲವತ್ತು ವರ್ಷಗಳ ಹಿಂದೆ ನನ್ನ ಮೊದಲ ಕಥಾ ಸಂಕಲನ 'ಮುಳ್ಳುಗಳು' ಪ್ರಕಟವಾದಾಗ ಸಂಪ್ರದಾಯಪ್ರಿಯರು ನಾನು ಎಲ್ಲ ಧಾರ್ಮಿಕ- ಸಾಮಾಜಿಕ ವಿಧಿ-ನಿಷೇಧಗಳನ್ನು ಅತಿಕ್ರಮಿಸಿದಾಕೆ, ಎಲ್ಲವನ್ನೂ ಬಿಟ್ಟಾಕೆ, ಎಂದು ಒಂದು ರೀತಿಯ ಬಹಿಷ್ಕಾರವನ್ನೇ ಹಾಕಿದ್ದರು. ಮುಂದೆ ಹತ್ತಾರು ವರ್ಷಗಳ ನಂತರ ವಿಜಯಾ ದಬ್ಬೆ, ಪ್ರತಿಭಾ ನಂದಕುಮಾರ, ಮತ್ತು ಇನ್ನಿತರ ಲೇಖಕಿಯರು ಮುಕ್ತ ಅಭಿವ್ಯಕ್ತಿಯ ಕಾವ್ಯ ಮತ್ತು ವಿಮರ್ಶೆ ಬರೆಯಲು ತೊಡಗುವವರೆಗೂ ಈ ಬಹಿಷ್ಕಾರ ಅಪರೋಕ್ಷವಾಗಿ ಜಾರಿಯಲ್ಲಿತ್ತು. ವೈದೇಹಿ, ನೇಮಿಚಂದ್ರ ಅವರಂತಹ

ಲೇಖಕಿಯರು ಗದ್ಯಸಾಹಿತ್ಯದಲ್ಲೂ ನಿಸ್ಸಂಕೋಚ ಪ್ರವೃತ್ತಿ ತೋರಿಸಿದಾಗ ನಿಧಾನವಾಗಿ ಆ ವಿರೋಧ ಕರಗುತ್ತ ಬಂದಿತು. ನಾಲ್ಕು ದಶಕಗಳ ಹಿಂದೆ ಲೇಖಕಿಯರ ಬರವಣಿಗೆಯ ಪರಿಸರ ಈಗಿದನಕ್ಕಿಂತ ಸಾಕಷ್ಟು ಬೇರೆಯಾಗಿತ್ತು. ಆಗಿದ್ದ ಬೆರಳೆಣಿಕೆಯಷ್ಟು ಲೇಖಕಿಯರಲ್ಲಿ ಹೆಚ್ಚಿನವರಿಗೆ ವಿಶ್ವವಿದ್ಯಾಲಯದ ಮಟ್ಟದ ಶೈಕ್ಷಣಿಕ ಹಿನ್ನೆಲೆ ಇರಲಿಲ್ಲ. ತಾಂತ್ರಿಕ ಕೌಶಲ್ಯದ ಬಗ್ಗೆ ಅವರು ಅಷ್ಟಾಗಿ ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ. ಪ್ರಕಾಶಕರು ಸಿಗುವುದೂ, ಸಿಕ್ಕರೆ ಯೋಗ್ಯ ಸಂಭಾವನೆ ನೀಡುವುದೂ, ಕಷ್ಟವಾಗಿತ್ತು. ಸಂಪ್ರದಾಯನಿಷ್ಠ ಸಾಮಾಜಿಕ ಪರಿಸರದಲ್ಲಿ ಮುಕ್ತ ಅಭಿವ್ಯಕ್ತಿ ಸುಲಭವಾಗಿರಲಿಲ್ಲ. ಇಷ್ಟೆಲ್ಲ ಅನಾನುಕೂಲತೆಗಳ ನಡುವೆಯೂ ಅನುಪಮಾ, ತ್ರಿವೇಣಿ, ಗೀತಾ ಕುಲಕರ್ಣಿ, ಶಾಂತಾದೇವಿ ಕಣವಿ, ಇಂದಿರಾ ಅವರು ಚೆನ್ನಾಗಿಯೇ ಬರೆದರು. ಮಹಿಳೆಯ ಶೋಷಣೆಯನ್ನು ಸೌಜನ್ಯಯುತವಾಗಿ ಪ್ರತಿಭಟಿಸಿದರು. ಆದರೆ ಇವತ್ತು ಲೇಖಕಿಯರು ಯಾರಿಗೂ ಯಾತಕ್ಕೂ ಅಂಜಬೇಕಾಗಿಲ್ಲ. ಪ್ರಕಟಣೆಯ ತೊಂದರೆಗಳೂ ಅಷ್ಟಾಗಿ ಇಲ್ಲ. ಸಮಾಜದಲ್ಲಿ ಪ್ರಗತಿಪರ ಚಿಂತಕರ ಸಂಖ್ಯೆ ಹೆಚ್ಚಾಗಿದೆ. ಈಗಿನ ಪರಿಸರ ಹೆಚ್ಚು ಮುಕ್ತವಾಗಿದೆ.

**ಗಂಗಾ** : ನಿಮ್ಮ ಬರವಣಿಗೆಗೆ ಪ್ರೇರಣೆ ನೀಡಿದ ಕೆಲವು ಘಟನೆಗಳನ್ನು ಉಲ್ಲೇಖಿಸುತ್ತೀರಾ?

**ವೀಣಾ** : ನಾನು ಬರವಣಿಗೆಯನ್ನು ಪ್ರಾರಂಭಿಸಲು ಯಾವುದೇ ಘಟನೆಗಳು ಕಾರಣವಾದವು ಅಂತ ಹೇಳಲಿಕ್ಕಾಗುವುದಿಲ್ಲ. ಆದರೆ ಕೆಲವು ವ್ಯಕ್ತಿಗಳಿಂದ, ಮತ್ತು ಮುಖ್ಯವಾಗಿ ಪರಿಸರದಿಂದ, ನನಗೆ ಪ್ರೇರಣೆ-ಪ್ರೋತ್ಸಾಹ- ಉತ್ತೇಜನೆ ಇವೆಲ್ಲ ಸಿಕ್ಕಿದವು ಅಂತ ಹೇಳಬಹುದು. ನನ್ನ ತಂದೆ ಒಬ್ಬ ಶ್ರೇಷ್ಠ ವಿಜ್ಞಾನಿ, ಖ್ಯಾತ ಕೆಮಿಸ್ಟ್ರಿ ಪ್ರೊಫೆಸರ್, ಹಾಗೂ ಆಯುರ್ವೇದದ ವೈದ್ಯ ತಜ್ಞರಾಗಿದ್ದರು. ಪ್ರೊ. ಎಲಬುರ್ಗಿ ಅಂತ. ಅವರು ಇಂಗ್ಲೀಷ್ ಮತ್ತು ಕನ್ನಡ ಸಾಹಿತ್ಯಪ್ರೇಮಿಯೂ ಆಗಿದ್ದರು. ಪುಸ್ತಕಗಳನ್ನು ಕೊಂಡು ಓದುತ್ತಿದ್ದರು. ತಾಯಿ ಇಂದಿರಾ ಮರಾಠಿ ಸಾಹಿತ್ಯದಲ್ಲಿ ವಿಶೇಷ ಆಸಕ್ತಿ ಹೊಂದಿದ್ದರು. ನಲವತ್ತು-ಐವತ್ತರ ದಶಕದ ಪ್ರಗತಿಪರ ಮರಾಠೀ ಸಾಹಿತ್ಯದ ಅನೇಕ ಕತೆ-ಕಾದಂಬರಿಗಳು, ಪತ್ರಿಕೆಗಳು ಮನೆಯಲ್ಲಿ ಯಾವಾಗಲೂ ಲಭ್ಯವಿರುತ್ತಿದ್ದವು. ಹೀಗೆ ಏಕಕಾಲದಲ್ಲಿ ಕನ್ನಡ, ಮರಾಠೀ, ಮತ್ತು ಇಂಗ್ಲೀಷ್ ಭಾಷೆಗಳ ಒಳ್ಳೆಯ ಕೃತಿಗಳನ್ನು ಓದುವ ಅವಕಾಶ ನನಗೆ ಬಾಲ್ಯದಲ್ಲೇ ಲಭ್ಯವಾಗಿದ್ದರಿಂದ ಈ ಪರಿಸರ ನನಗೆ ಬರೆಯಲು ಉತ್ತೇಜನ ನೀಡಿತು.

**ಗಂಗಾ** : ಕೌಟುಂಬಿಕ ಪರಿಸರ ನಿಮ್ಮ ಸೃಜನಶೀಲತೆಗೆ ಇತ್ಯಾತ್ಮಕ ಬೆಂಬಲ ನೀಡಿತ್ತೇ? ನೀಡಿದ್ದರೆ ಹೇಗೆ?

**ವೀಣಾ** : ಸುದೈವದಿಂದ ಈಗ ಅರ್ಧ ಶತಮಾನದಷ್ಟು ಹಿಂದೆಯೇ ನಮ್ಮ

ಮನೆಯಲ್ಲಿ ಬಹಳ ಸುಧಾರಿತ ವಾತಾವರಣವಿತ್ತು. ಪ್ರತಿಷ್ಠಿತ ಮನೋಹರ ಗ್ರಂಥಮಾಲೆಯ ಸಂಸ್ಥಾಪಕರಾದ ದಿ.ಜಿ.ಬಿ ಜೋಶಿಯವರು ನನ್ನ ತಂದೆಯ ಸಹಪಾಠಿ ಹಾಗೂ ಸ್ನೇಹಿತರಾಗಿದ್ದರು. ನಿಯಮಿತವಾಗಿ ಅವರು ಪುಸ್ತಕಗಳನ್ನು ಬಾಗಲಕೋಟೆಯಲ್ಲಿರುವ ನಮ್ಮ ಮನೆಗೆ ಹೊತ್ತು ತರುತ್ತಿದ್ದರು. ನನ್ನ ತಂದೆಯ ಇನ್ನೊಬ್ಬ ಸ್ನೇಹಿತರಾದ ದಿ. ವಿನೀತ ರಾಮಚಂದ್ರರಾಯರೂ ಪುಸ್ತಕಗಳನ್ನು ತಂದುಕೊಡುತ್ತಿದ್ದರು. ನಾಡಿಗೇರ ರಘುನಾಥರಾಯರು, ಬುರ್ಲಿ ಬಿಂದುಮಾಧವಾಚಾರ್ಯರು, ಜಮಖಂಡಿಯ ಸತ್ಯಕಾಮರು ಇವರೆಲ್ಲ ತಂದೆಯವರಿಗೆ ಹತ್ತಿರದವರಾಗಿದ್ದರಿಂದ ಒಳ್ಳೆಯ ಸಾಹಿತ್ಯದೊಂದಿಗೆ ನನಗೆ ಚಿಕ್ಕಂದಿನಲ್ಲೆ ಒಡನಾಟ ಬೆಳೆಯಿತು. ಮಹಾರಾಷ್ಟ್ರದವರಾದ ನನ್ನ ತಾಯಿ ಟಿಳಕ, ಗೋಖಲೆ, ಕರ್ವೆ ಇತ್ಯಾದಿ ಸಮಾಜ ಸುಧಾರಕರಿಂದ ಪ್ರೇರಿತರಾಗಿದ್ದು, ಅನೇಕ ಮರಾಠಿ ಪತ್ರಿಕೆಗಳು ಮತ್ತು ಪುಸ್ತಕಗಳನ್ನು ತರಿಸುತ್ತಿದ್ದರು. ಅಲ್ಲದೆ ರಾಷ್ಟ್ರಭಾಷೆಯಾದ ಹಿಂದಿಯನ್ನು ಕಡ್ಡಾಯವಾಗಿ ಕಲಿಯಲು ಹಚ್ಚಿದರು. ಓದುವ ಬಗ್ಗೆ ಪ್ರೀತಿ ಬೆಳೆಸಿದ ನನ್ನ ತಂದೆ-ತಾಯಿ ನನ್ನ ಬರವಣಿಗೆಯನ್ನು ತುಂಬ ಹುರುಪಿನಿಂದ ಉತ್ತೇಜಿಸಿದರು. ನಾನು ಏನಾದರೂ ಅತ್ಯಲ್ಪವಾದುದನ್ನು ಇವತ್ತು ಸಾಧಿಸಿದ್ದರೆ ಅದರ ಸಂಪೂರ್ಣ ಶ್ರೇಯಸ್ಸು ನನ್ನ ತಾಯಿ-ತಂದೆಗೆ ಸಲ್ಲಬೇಕು. ನನ್ನ ಗಂಡ-ಮಕ್ಕಳಿಂದಲೂ ಬರವಣಿಗೆಗೆ ಪ್ರೋತ್ಸಾಹ-ಸಹಕಾರ ಎಲ್ಲ ದೊರೆಯಿತು. ಯಾಕೆ ಸದಾ ಅಡುಗೆ-ತಿಂಡಿ ಅಂತ ಒದ್ದಾಡುತ್ತೀ, ಅದನ್ನು ಸಂಕ್ಷಿಪ್ತವಾಗಿ ಮಾಡಿ ಮುಗಿಸಿ ಏನಾದರೂ ಬರೆಯಬಾರದೇ. ಇಂಗ್ಲೀಷನಲ್ಲಿ ಬರೆಯಲ್ಲ-ಅಂತ ಮಕ್ಕಳು ಒತ್ತಾಯಿಸುತ್ತಾರೆ. ಆದರೆ ಬರವಣಿಗೆಗೆ ಕುಟುಂಬದಿಂದ ಅಡ್ಡಿಯಾಗಿ ಒದ್ದಾಡುವ ಬಹಳ ಲೇಖಕಿಯರನ್ನು ನಾನು ನೋಡಿದ್ದೇನೆ. ಬರೆಯುವ ಒತ್ತಡ ತೀವ್ರವಾದಾಗ ಅಡ್ಡಿಗಳನ್ನು ದಾಟಿ ಬರುವ ಸಾಮರ್ಥ್ಯವು ತಾನಾಗಿ ಬರುತ್ತದೆ.

ಗಂಗಾ : ವಸ್ತುವಿನಲ್ಲಿ, ತಂತ್ರದಲ್ಲಿ, ಭಾಷೆಯಲ್ಲಿ ನಿಮ್ಮದು ವಿಶಿಷ್ಟ ನವ್ಯ ದೃಷ್ಟಿ. ಒಳಗಿನ ಮತ್ತು ಹೊರಗಿನ ಸತ್ಯದ ಹುಡುಕಾಟದಲ್ಲಿ ನಿಮ್ಮ ಕಥಾ ಪಾತ್ರಗಳು ನಿರಂತರವಾಗಿ ತೊಡಗಿಕೊಂಡಿರುತ್ತವೆ. ಉದಾ : ಮುಳ್ಳುಗಳು ಕಥೆಯ ಶಾಂತಿ, ಅತಿಥಿಯ ಲೀಲಾವತಿ, ಪ್ರಶ್ನೆಯ ಶಶಿ, ನೆನಪು ಬರೀ ನೆನಪು ಕಥೆಯ ನಾಯಕಿ, ಮತ್ತು ಕಾದಂಬರಿಗಳಲ್ಲಿಯ ನಾಯಕಿಯರು ಇವರೆಲ್ಲ ಹುಡುಕಾಟವಾಗಿಯೇ ಉಳಿಯುತ್ತದೆ. ಬದುಕಿನ ಸಂಕೀರ್ಣತೆ, ಸಂದಿಗ್ಧತೆಯನ್ನು, ಒಪ್ಪಿಕೊಳ್ಳುವ ಕ್ರಮ ಕಥೆಗೆ ಕಲಾತ್ಮಕತೆಯನ್ನು ನೀಡಿದೆ. ಪ್ರಾಮಾಣಿಕ ದಿಟ್ಟತನ ಕಥೆಗೆ ಸೊಬಗನ್ನು ತಂದಿದೆ. ಆದರೆ ಈ ಎಲ್ಲ ಕಥೆಗಳು ಒಂದೇ ಕಥೆಯ ಬೆಳವಣಿಗೆ ಅನಿಸುತ್ತದೆ. ನಿಮ್ಮ ಅಭಿಪ್ರಾಯವೇನು?

ವೀಣಾ : ಒಳ್ಳೆಯ ಪ್ರಶ್ನೆ. ನನ್ನ ಬರವಣಿಗೆಯ ಕೇಂದ್ರ ಯಾವಾಗಲೂ ಮಹಿಳೆ, ಆಕೆಯ ಸಮಸ್ಯೆಗಳು, ಆಕೆಯ ಹೋರಾಟ, ಆಕೆಯ ಶೋಷಣೆ, ಆಕೆಯ ಪ್ರತಿಭಟನೆ

ಣವೇ ಆಗಿದೆ. ಈ ಮಹಿಳೆಯರು ಭಿನ್ನ-ಭಿನ್ನ ಕನಸುಗಳನ್ನು ಕಾಣುವವರು. ಆದರೆ ಬಹುಪಾಲು ಮಹಿಳೆಯರಿಗೆ ನನ್ನ ಕತೆಗಳಲ್ಲಿ, ನಮ್ಮ ನಿಜಜೀವನದಲ್ಲಿ ಇರುವ ಹಾಗೆಯೇ, ಒಂದಲ್ಲೊಂದು ರೀತಿಯಿಂದ ಭ್ರಮ-ನಿರಸನವಾಗುತ್ತದೆ. ಕನಸಿಗೂ ವಾಸ್ತವಕ್ಕೂ ಇರುವ ವ್ಯತ್ಯಾಸ, ಮತ್ತು ಪ್ರತಿಕೂಲ ಸಾಮಾಜಿಕ ಪರಿಸ್ಥಿತಿ, ಮತ್ತು ಮುಖ್ಯವಾಗಿ ಅವರ ಜೀವನದಲ್ಲಿ ಎದುರಾಗುವ ಗಂಡಸರ ಸ್ವಾರ್ಥ-ಸಣ್ಣತನ, ಇತ್ಯಾದಿ ಕಾರಣಗಳಿಂದ ಅವರು ನೋವು ಅನುಭವಿಸಬೇಕಾಗುತ್ತೆ. ನನ್ನ ಬರವಣಿಗೆಯ ಪ್ರಾರಂಭದ ಘಟ್ಟದ ಕತೆಗಳಲ್ಲಿ ಈ ನೋವು ಸಾಮಾನ್ಯ ಒಸರು ಆಗಿರುವುದರಿಂದ ಎಲ್ಲ ಕಥೆಗಳೂ ಒಂದೇ ಕಥೆಯ ಬೆಳವಣಿಗೆ ಅನ್ನುವ ಅಭಿಪ್ರಾಯ ಕೊಡಬಹುದು.

ಗಂಗಾ : ನೀವು ದಿಟ್ಟ ಪ್ರಾಮಾಣಿಕ ಲೇಖಕಿ ಎಂದು ಖ್ಯಾತಿ ಪಡೆದವರು. ೧೯೯೯ರಲ್ಲಿ ಬೆಂಗಳೂರು ಬಳಿ ಹೊಸೂರಿನ ನಿಸರ್ಗಧಾಮದಲ್ಲಿ ನಡೆದ ಕಾರ್ಯಕ್ರಮಗಳು ಲೇಖಕಿಯರ ಆತ್ಮಕಥೆಗಳು ಪ್ರಕಟವಾಗಲು ಕಾರಣವಾದವು. ನಿಮ್ಮದು ಲೇಖಿಲೋಕದಲ್ಲಿ ಪ್ರಕಟವಾಯಿತು. ನಮ್ಮ ಲೇಖಕಿಯರ ಆತ್ಮಚರಿತ್ರೆಗಳಿಗಿಂತ ಕಥೆ-ಕವಿತೆಗಳೇ ಒಂದು ರೀತಿಯಲ್ಲಿ ಆತ್ಮಚರಿತ್ರೆಗಳ ಪುಟಗಳಾಗಿವೆ. ನಿಮ್ಮ ನಿಲುವೇನು?

ವೀಣಾ : ಕಳೆದ ಅರ್ಧಶತಮಾನದಲ್ಲಿ ಕನ್ನಡ ಮಹಿಳಾ ಸಾಹಿತ್ಯದಲ್ಲಿ ಸಾಕಷ್ಟು ಗುಣಾತ್ಮಕ ಬೆಳವಣಿಗೆ ಆಗಿದೆ. ಇವತ್ತು ನಮ್ಮ ಕೆಲವು ಲೇಖಕಿಯರು ಬೇರಾವುದೇ ಭಾರತೀಯ ಭಾಷೆಯ ಲೇಖಕಿಯರಿಗೆ ಸರಿಸಮನಾಗಿ ನಿಲ್ಲುವಷ್ಟು ಪ್ರಬುದ್ಧತೆ ಸಾಧಿಸಿದ್ದಾರೆ. ಮಹಿಳಾ ಸಾಹಿತ್ಯ ಅಂತ ಪ್ರತ್ಯೇಕವಾಗಿ ಪರಿಗಣಿಸಬೇಕಾದ ಅವಶ್ಯಕತೆ ಈಗ ಇಲ್ಲವೇ ಇಲ್ಲ. ಆದರೂ ಸಹ, ನಮ್ಮಲ್ಲಿ ಇನ್ನೂ ಬಂಗಾಲಿ ಅಥವಾ ಮರಾಠೀ ಲೇಖಕಿಯರು ಆತ್ಮಚರಿತ್ರೆ ಬರೆದ ಹಾಗೆ ಮುಕ್ತವಾಗಿ ದಿಟ್ಟತನದಿಂದ ಯಾರೂ ಬರೆಯುವ ಸಾಹಸ ಮಾಡಿಲ್ಲ. ಲೇಖಿಲೋಕದಲ್ಲಿ ಕೆಲವರು ಧೈರ್ಯದಿಂದ ತಮ್ಮ ಖಾಸಗಿ ಜೀವನದ ಬಗ್ಗೆ ಹೇಳಿಕೊಂಡಿದ್ದಾರೇನೋ ಹೌದು. ಆದರೆ ಪೂರ್ಣಪ್ರಮಾಣದಲ್ಲಿ ಆತ್ಮಚರಿತೆಗಳು ನಮ್ಮಲ್ಲಿನ್ನೂ ಬಂದಿಲ್ಲ. ಈ ಮಾತು ಲೇಖಕರಿಗೂ ಅನ್ವಯಿಸುತ್ತದೆ ಅನ್ನೋದನ್ನು ಗಮನಿಸಬೇಕು. ಇನ್ನು ನಮ್ಮ ಲೇಖಕಿಯರ ಕಥೆ-ಕವಿತೆಗಳೇ ಆತ್ಮಚರಿತೆಗಳ ಪುಟಗಳಾಗಿವೆ ಅನ್ನುವುದು ಒಂದು ಸಾಮಾನ್ಯ ಹೇಳಿಕೆಯಾಗುತ್ತದೆ. ಯಾಕೆಂದರೆ ಯಾವುದೇ ಒಳ್ಳೆಯ ಕೃತಿ ಲೇಖಕನ/ಲೇಖಕಿಯ ಸ್ವಂತ ಅನುಭವದ ಮೇಲೆ ಬಹುಮಟ್ಟಿಗೆ ಅವಲಂಬಿಸಿರುತ್ತದೆ. ಅಂದರೆ ಕೃತಿಯ ವಸ್ತುವನ್ನು ಸುತ್ತಲಿನ ಜೀವನದಿಂದ ಆಯ್ದುಕೊಂಡಿದ್ದರೂ ಅಭಿವ್ಯಕ್ತಿಯಲ್ಲಿ ಯಾವಾಗಲೂ ಸ್ವಂತಿಕೆ ಇರುತ್ತದೆ. ದೃಷ್ಟಿಕೋನ ಸ್ವಂತದ್ದಾಗಿರುತ್ತದೆ. ಆದ್ದರಿಂದ ಲೇಖಕನ ಕೃತಿಯಲ್ಲಿ ಆತನ ಅಥವಾ ಆಕೆಯ ಸ್ವಂತ ಜೀವನದ ಝಲಕು ಇದ್ದೇ ಇರುತ್ತದೆ. ಆದರೆ ಅಷ್ಟು ಮಾತ್ರಕ್ಕೆ ಕಥೆ ಕವಿತೆಗಳು ಆತ್ಮಚರಿತೆ ಆಗಲಾರವು.

ಗಂಗಾ : ಸ್ತ್ರೀತನ ಎಂದರೇನು? ಸ್ತ್ರೀ ಎಂದರೆ ಯಾರು? ಸ್ತ್ರೀತ್ವ ಎಂಬುದು ನಿಮ್ಮ ಸಾಹಿತ್ಯ ಲೋಕದ ಪ್ರಯಾಣಕ್ಕೆ ಪೂರಕ Positive (ಇತ್ಯಾತ್ಮಕ) ಅಂಶವಾಗಿ ಬಂದಿದೆಯೇ? ಇಲ್ಲವೆ ಇದರಿಂದ Negative (ನೇತ್ಯಾತ್ಮಕ) ಆದ ಪರಿಣಾಮಗಳನ್ನು ಎದುರಿಸಬೇಕಾಯಿತೇ? ಸ್ವಲ್ಪ ವಿವರಿಸುವುದಾದರೆ ಸ್ತ್ರೀತ್ವ ಎಂಬುದು ನಿಮ್ಮ ವ್ಯಕ್ತಿತ್ವದ ಬೆಳವಣಿಗೆಗೆ ಒಂದು ಅಹಂಕಾರವಾಗಿಯೇ ಶಕ್ತಿ ತುಂಬಿತೇ?, ಇಲ್ಲವೆ ಹೇಗೆ? ವಿವರಿಸಿ.

ವೀಣಾ: ಸ್ತ್ರೀತನ ಅಥವಾ ಸ್ತ್ರೀತ್ವ ಅನ್ನುವುದು ಮಹಿಳೆಯ ವಿಶಿಷ್ಟವಾದ ಅಂಶ. ಆಕೆಯ ಅಸ್ಮಿತೆಯ ಅರಿವು. ಆಕೆಯ ವ್ಯಕ್ತಿತ್ವದ ಗುರುತು. ಆಕೆಯ ಇಡೀ ಅಸ್ತಿತ್ವದ ಪ್ರಜ್ಞೆ ಅಂತೆಯೇ ಆಕೆ ಹೆಮ್ಮೆಪಟ್ಟುಕೊಳ್ಳಬೇಕಾದ ಗುಣ. ನನ್ನ ಮಟ್ಟಿಗಂತೂ ಅದು ಯಾವಾಗಲೂ ಇತ್ಯಾತ್ಮಕವಾದ ಪ್ರಜ್ಞೆಯೇ ಆಗಿದೆ. ಸ್ತ್ರೀ ಆಗಿರುವುದು ಶುಭ, ಕಲ್ಯಾಣ, ಅಭಿಮಾನ, ಪುಣ್ಯ–ಅಂತೆಲ್ಲ ಪರಿಕಲ್ಪನೆ ನನ್ನ ಚಿಕ್ಕಂದಿನಲ್ಲಿ ನಾನು ತಾಯಿಯಿಂದ ಕಲಿತೆ. ಅದೆಂದೂ ನನಗೆ Negative concept ಆಗಿ ತೋರಿಲ್ಲ. ಆದರೆ ಇದರಲ್ಲಿ ಅಹಂಕಾರದ ಅಂಶವಿದೆಯೆಂದು ನನಗನಿಸುವುದಿಲ್ಲ. ಸ್ತ್ರೀತ್ವದ ಅರಿವಿನಲ್ಲಿ ಅಹಂಕಾರ ಇಲ್ಲ ಇರಬಾರದು ಸಹ. ಇಲ್ಲಿ ಅಭಿಮಾನಕ್ಕೇ ಮುಖ್ಯಸ್ಥಾನ. ಹೆಣ್ಣುಮಕ್ಕಳಾಗಿರುವುದೇ ಒಂದು ಅಭಿಮಾನ. ಒಂದು ಚೆಂದ.

ಈ ಸ್ತ್ರೀತ್ವ ಅನ್ನುವುದು ಒಂದು ಜೈವಿಕ ಸತ್ಯವೂ ಹೌದು; ಅಂದರೆ biological ಗೆ ಸಂಬಂಧಿಸಿದ್ದು, ಅನುಭಾವಿಕ ಸತ್ಯವೂ ಹೌದು; ಅಂದರೆ conscience ಗೆ ಸಂಬಂಧಿಸಿದ್ದು, ಮತ್ತು ಅಸ್ತಿತ್ವೀಯ ಸತ್ಯವೂ ಹೌದು; ಅಂದರೆ existence ಗೆ ಸಂಬಂಧಿಸಿದ್ದು. ತನ್ನ ಹೆಣ್ತನದಿಂದಾಗಿಯೇ ಹೆಣ್ಣಿಗೊಂದು ವೈಶಿಷ್ಟ್ಯವಿದೆ. ಆಕೆಯ ಸ್ತ್ರೀತ್ವವೇ ಒಂದು ವಿಶಿಷ್ಟ ಅನುಭವ. ಈ ಅನುಭವದ ಅಭಿವ್ಯಕ್ತಿಯೇ ಸ್ತ್ರೀವಾದಿ ಸಾಹಿತ್ಯ.

ಗಂಗಾ : ೨೦೦೩ರಲ್ಲಿ ೫ನೇ ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನದ ಅಧ್ಯಕ್ಷರಾಗಿದ್ದಿರಿ. ಆಗ ನಾವು ಲೇಖಕಿಯರು ಈ ತನಕ ಸಾಧಿಸಿರುವುದು ಏನು? ಎಂದು ಕೇಳುತ್ತಲೇ ಸಾಧಿಸಬೇಕಾದ್ದದೇನು? ಎಂಬುದರ ವಿಮರ್ಶೆ ಮಾಡಿದ್ದೀರಿ. ಈಗಾಗಲೇ ಮಹಿಳೆ ಸಾಹಿತ್ಯದಲ್ಲಿ ಗುರುತಿಸಿರುವ ಕಾತ್ಯಾಯಿನಿ ಮತ್ತು ಗಾರ್ಗಿ ಮಾದರಿಗಳ ಪ್ರತಿಭೆಗಳು ಕೂಡಿದಾಗ ಒಳ್ಳೆಯ ಮಹಿಳಾ ಸಾಹಿತ್ಯ ಸೃಷ್ಟಿಯಾಗಬಹುದು ಎಂದಿರಿ, ಕನ್ನಡದ ಯಾವ ಲೇಖಕಿಯರಲ್ಲಿ ಈ ಪ್ರತಿಭೆಯ ಸಂಗಮವನ್ನು ಗುರುತಿಸುತ್ತೀರಿ?

ವೀಣಾ : ಕಾತ್ಯಾಯಿನಿ ಮತ್ತು ಗಾರ್ಗಿ ಉಪನಿಷತ್ ಸಾಹಿತ್ಯದಲ್ಲಿ ಬರುವ ಎರಡು ವಿಭಿನ್ನ ಸ್ತ್ರೀ ಪಾತ್ರಗಳ ಆಧಾರದ ಮೇಲೆ ಕಟ್ಟಿದ ತಾತ್ವಿಕ ಆಕೃತಿಗಳು. ಕಾತ್ಯಾಯಿನಿ ಮಾದರಿಯ ಸ್ತ್ರೀ ತಾಯಿಯಾಗಿ, ಹೆಂಡತಿಯಾಗಿ, ಅಕ್ಕ–ತಂಗಿ–ಮಗಳು, ಗೃಹದೇವತೆ ಆಗಿರುತ್ತಾಳೆ. ಆದರೆ ಆಕೆಗೆ ಆಕೆಯ ಸ್ತ್ರೀತ್ವಕ್ಕೆ ಅವಮಾನವಾದರೆ ಎಲ್ಲ ಧಿಕ್ಕರಿಸಿ ದೂರ

ಹೋಗುವ ಶಕ್ತಿ ಅವಳಿಗಿರುತ್ತದೆ. ಗಾರ್ಗಿಯು ಮಾದರಿ ಅಂದರೆ ಅನ್ಯಾಯ-ಶೋಷಣೆ-ದಬ್ಬಾಳಿಕೆ ವಿರುದ್ಧ ಉಗ್ರವಾಗಿ ಪ್ರತಿಭಟಿಸುವ ಮಾದರಿ. ನಮ್ಮ ಕನ್ನಡ ಸಾಹಿತ್ಯದಲ್ಲಿ ಇವೆರಡೂ ಬಗೆಯ ಸ್ತ್ರೀಪಾತ್ರಗಳನ್ನು ಕಾಣಬಹುದು. ಆದರೆ ಮನುಷ್ಯ ಸ್ವಭಾವವನ್ನು ಹೀಗೆ black and white ಅಂತ ನಿಶ್ಚಿತವಾಗಿ ವರ್ಗೀಕರಣ ಮಾಡಲಾಗುವುದಿಲ್ಲ ಅನ್ನುವುದೂ ನಿಜವೇ. ಕಾತ್ಯಾಯಿನಿ ಮತ್ತು ಗಾರ್ಗಿ ಎರಡೂ ಮಾದರಿಯ ಪ್ರತಿಭೆಗಳು ಕೂಡಿದಾಗ ಒಳ್ಳೆಯ ಸಾಹಿತ್ಯ ಸೃಷ್ಟಿಯಾದೀತು ಅಂತ ನಾನು ಹೇಳಿದ್ದು ಆ ಅರ್ಥದಲ್ಲಿ. ಅಂದರೆ ಪಾತ್ರದಲ್ಲಿ complexity, ಸಂಕೀರ್ಣತೆ, ಇರುವುದು ಅವಶ್ಯ. ಅಂದಾಗಲೇ ಅದು ವಸ್ತುನಿಷ್ಠವಾಗಿರುತ್ತದೆ. ಕನ್ನಡದಲ್ಲಿ ವೈದೇಹಿ, ನೇಮಿಚಂದ್ರ, ಪ್ರತಿಭಾ ನಂದಕುಮಾರ, ಎಚ್. ನಾಗವೇಣಿ ಇತ್ಯಾದಿ ಲೇಖಕಿಯರ ಬರವಣಿಗೆಯಲ್ಲಿ ಇಂಥ ಸಂಕೀರ್ಣತೆ ಗುರುತಿಸಬಹುದು.

**ಗಂಗಾ : ಈ ಮೇಲಿನ ಮಾದರಿಗಳ ಪ್ರತಿಭೆಗಳಲ್ಲದೆಯೇ ಅನೇಕ ಮಾದರಿ ಸ್ತ್ರೀ ಪಾತ್ರಗಳನ್ನು ನೀವು ಈ ತನಕ ಕಥೆಗಳಲ್ಲಿ ಸೃಷ್ಟಿಸಿದ್ದೀರಿ ಎಂದು ಎಲ್.ಸಿ ಸುಮಿತ್ರಾ ಅವರು ಗುರುತಿಸುತ್ತಾರೆ. ಸ್ತ್ರೀ ಮಾದರಿ ಪಾತ್ರಗಳು ಇರಬೇಕೆಂದು ನಿಮಗೆ ಅನಿಸುತ್ತದೆಯೇ? ಅಥವಾ ಈ ರೀತಿ ನೋಡುವುದು ಪುರುಷ ವಿಮರ್ಶೆಯ ಮಾನದಂಡವಾಗಿಲ್ಲವೇ?**

ವೀಣಾ : ಪ್ರಜ್ಞಾಪೂರ್ವಕವಾಗಿ ಸ್ತ್ರೀ ಮಾದರಿ ಅಥವಾ ಯಾವುದೇ ಮಾದರಿ ಪಾತ್ರಗಳನ್ನು ಸೃಷ್ಟಿಸಹೊರಟಾಗ ಕೃತಿಯ ಕಲಾತ್ಮಕತೆಗೆ ಕುಂದು ಉಂಟಾಗುತ್ತದೆ. ನಮ್ಮ ದಲಿತ -ಬಂಡಾಯ ಸಾಹಿತ್ಯದಲ್ಲಿ ಆದದ್ದೂ ಹಾಗೆಯೇ. ಕೃತಿಯ ವಸ್ತುವಿಗೆ ಪೂರಕವಾಗಿ ಆ ಮಾದರಿಯ ಪಾತ್ರ ಸೃಷ್ಟಿಯಾದಾಗ ಕಲಾತ್ಮಕತೆಯೂ ಉಳಿಯುತ್ತದೆ. ಸಹಜತೆಯೂ ಇರುತ್ತದೆ. ಮಹಿಳೆಯರ ಸಾಹಿತ್ಯದಲ್ಲಿ ಮಹಿಳೆಯರಿಗೇ ವಿಶಿಷ್ಟವಾದ ಅನುಭವಗಳಿರಬೇಕು. ಸ್ತ್ರೀ ಮಾದರಿಯ ಪಾತ್ರಗಳೇ ಇರಬೇಕು ಅನ್ನುವುದು ಸಂಕುಚಿತ ವಿಮರ್ಶೆಯಾಗುತ್ತದೆ.

**ಗಂಗಾ : ಕನ್ನಡದ ಮಹಿಳಾ ಸಾಹಿತ್ಯಕ್ಕೆ ವಿಮರ್ಶಾಲೋಕ ಪ್ರತಿಸ್ಪಂದಿಸಿದ, ಪ್ರತಿಸ್ಪಂದಿಸುತ್ತಿರುವ ಕ್ರಮದ ಬಗ್ಗೆ ನಿಮ್ಮ ವಿಚಾರಗಳೇನು? ನಿಮ್ಮ ಕಥೆಗಳನ್ನು ಆಧಾರವಾಗಿಟ್ಟುಕೊಂಡು ಹೇಳಿ.**

ವೀಣಾ : ಅರವತ್ತು ಎಪ್ಪತ್ತರ ದಶಕಗಳಲ್ಲಿ ಅಷ್ಟೇ ಏಕೆ, ಎಂಬತ್ತರ ದಶಕದ ಮಧ್ಯದವರೆಗೂ ಮಹಿಳಾ ಸಾಹಿತ್ಯವನ್ನು ಅವಜ್ಞೆಯಿಂದ ಕಾಣಲಾಗುತ್ತಿತ್ತು. ಅದಕ್ಕೆ ಕಾರಣಗಳು ಇದ್ದವು. ಆಧುನಿಕ ಕನ್ನಡ ಸಾಹಿತ್ಯದ ಮೊದಲ ಘಟ್ಟದಲ್ಲಿ ನಮ್ಮ ಲೇಖಕಿಯರ ಕೃತಿಗಳು ಕಲಾತ್ಮಕತೆ ಹಾಗೂ ವೈಚಾರಿಕತೆ ಕೊರತೆಯಿಂದ ಸೊರಗಿದಂತಿರುತ್ತಿದ್ದುದು ಬಹುಮಟ್ಟಿಗೆ ನಿಜವೂ ಆಗಿತ್ತು. ಲೇಖಕಿಯರ ಸಾಹಿತ್ಯದಲ್ಲಿ, ಮುಖ್ಯವಾಗಿ ಕಾವ್ಯದಲ್ಲಿ ಹಾಗೂ ನಂತರ ವಿಮರ್ಶೆಯಲ್ಲಿ, ಕ್ರಮೇಣ ಸಜ್ಞಕತೆ ಹಾಗೂ

ಕಾದಂಬರಿಯಲ್ಲೂ ಸಹ, ಒಮ್ಮೆಲೆ ಎದ್ದು ಕಾಣುವಂತಹ ಬೆಳವಣಿಗೆ ಕಂಡುಬಂದಿತು. ಆಗಲೇ ವಿಮರ್ಶಕರು ಈ ಬಗ್ಗೆ ಗಮನ ಹರಿಸಬೇಕಿತ್ತು. ಆದರೆ ಹಾಗಾಗದೆ ಮುಂದೆ ಒಂದು ದಶಕದ ನಂತರ ಈಗೀಗ ವಿಮರ್ಶಕರು ಮಹಿಳಾ ಸಾಹಿತ್ಯದ ಗುಣಮಟ್ಟ ಮೇಲೇರಿರುವ ಬಗ್ಗೆ ಮಾತನಾಡುತ್ತಿದ್ದಾರೆ. ಆದರೆ ನನ್ನ ಕತೆಗಳ ಮಟ್ಟಿಗೆ ಹೇಳುವುದಾದರೆ– ನನಗೆ ಮೊದಲಿನಿಂದಲೂ ಬಹುಪಾಲು ವಿಮರ್ಶಕರಿಂದ ಒಳ್ಳೆಯ ಪ್ರತಿಕ್ರಿಯೆ ಸಿಕ್ಕಿತು. ನವ್ಯಕಾಲದಲ್ಲಿ ಮತ್ತು ನಂತರ ಸಹ ನನಗೆ ಹೆಚ್ಚಾಗಿ ಮೆಚ್ಚಿಕೆ – ಪ್ರಶಂಸೆಯೇ ಸಿಕ್ಕಿತು. ಉಳಿದವರಂತೆ ಆ ಬಗ್ಗೆ ನನಗೆ ಕಂಪ್ಲೇಂಟ್ಸ್ ಇಲ್ಲ.

ಗಂಗಾ : ಲೇಖಕಿಯರು ವೈವಿಧ್ಯಮಯ ವಸ್ತುಗಳನ್ನು ಕಲ್ಪಿಸಲಾರರು. ಕಲ್ಪಿಸಿದರೂ ಸಮರ್ಥವಾಗಿ ಅವುಗಳನ್ನು ನಿರ್ವಹಿಸಲಾರರು ಎಂಬ ಪಾರಂಪರಿಕ ವಿಮರ್ಶೆಗೆ ನಿಮ್ಮ ಪ್ರತಿಕ್ರಿಯೆ ಏನು?

ವೀಣಾ : ಮೊದಲಿನಿಂದಲೂ ಮಹಿಳಾ ಸಾಹಿತ್ಯದ ಬಗ್ಗೆ ಗಂಡಸರು ವಿಮರ್ಶಕರು ಮಾಡುತ್ತಾ ಬಂದಿರುವ ಆಕ್ಷೇಪಣೆ ಇದು. ಮಹಿಳೆಯರ ಅನುಭವಗಳು ಸೀಮಿತವಾಗಿದ್ದರಿಂದ ಅವರ ವಿಷಯವ್ಯಾಪ್ತಿ ಸೀಮಿತವಾಗಿದೆ ಅಂತ ಅವರೆನ್ನುತ್ತಾರೆ. ಈ ಸೀಮಿತ ವಸ್ತುವನ್ನೇ ನಿರೂಪಿಸುವಾಗ ಲೇಖಕಿಯರ ದೃಷ್ಟಿಕೋನದಲ್ಲಿ ಮತ್ತು ನಿರೂಪಣಾ ವಿಧಾನದಲ್ಲಿ Qenuiness ಅಥವಾ authenticity ಇಲ್ಲ ಅಂತ ವಿಮರ್ಶಕರು ಅನ್ನುತ್ತಾರೆ. ಮೂವತ್ತು–ನಲ್ವತ್ತು ವರ್ಷಗಳ ಹಿಂದಿನ ಮಹಿಳಾ ಸಾಹಿತ್ಯದ ವಿಷಯದಲ್ಲಿ ಈ ಪಾರಂಪರಿಕ ವಿಮರ್ಶೆ ಬಹುಮಟ್ಟಿಗೆ ಸತ್ಯವೂ ಆಗಿತ್ತು. ಆದರೆ ಇವತ್ತಿನ ಬದಲಾದ ಪರಿಸ್ಥಿತಿಯಲ್ಲಿ ಇದನ್ನು ಖಂಡಿತ ಒಪ್ಪಿಕೊಳ್ಳಲಾಗುವುದಿಲ್ಲ. ಎಚ್. ನಾಗವೇಣಿಯವರ 'ಗಾಂಧಿ ಬಂದ' ಎಂಬ ಕಾದಂಬರಿ, ಈಚೆಗೆ ಬಂದ ವಿನಯಾ ವಕ್ಕುಂದ–ಸುಮಂಗಲಾ–ಮಿತ್ರಾ ವೆಂಕಟ್ರಾಜ ಇತ್ಯಾದಿ ಲೇಖಕಿಯರ ಕತೆಗಳು–ಇವನ್ನು ನೋಡಿದಾಗ ಇಂಥ ವಿಮರ್ಶೆಗೆ ಅರ್ಥವಿಲ್ಲ ಅನಿಸುತ್ತದೆ.

ಗಂಗಾ : ಸ್ತ್ರೀ ಸಾಹಿತ್ಯ ವಿಮರ್ಶೆಗೆ ಪ್ರತ್ಯೇಕ ಮಾನದಂಡಗಳು ಬೇಕೆ? ಅವು ಯಾವಾಗಿರಬೇಕು? ಸಾಹಿತ್ಯೇತರ ಕಾರಣಗಳು ಸೃಜನಶೀಲತೆಗೆ ಅಡ್ಡಿಯುಂಟು ಮಾಡುತ್ತದೆ ಎಂಬುದರ ಬಗ್ಗೆ ನಿಮ್ಮ ನಿಲುವೇನು?

ವೀಣಾ : ಸ್ತ್ರೀ ಸಾಹಿತ್ಯ ವಿಮರ್ಶೆಗೆ ಪ್ರತ್ಯೇಕ ಮಾನದಂಡಗಳು ಬೇಕಾಗಿಯೇ ಇಲ್ಲ. ವಿಮರ್ಶೆಯಲ್ಲಿ ಯಾವುದೇ ರೀತಿಯ ಅನುಕಂಪ ಅಥವಾ ರಿಯಾಯಿತಿ ಲೇಖಕಿಯರಿಗೆ ಬೇಕಾಗಿಲ್ಲ. ಸೃಜನಶೀಲತೆಗೆ ಸಾಹಿತ್ಯೇತರ ಕಾರಣಗಳಾಗಲೀ ಬೇರಾವುದೇ ಬಗೆಯ ಕಾರಣಗಳಾಗಲೀ ಅಡ್ಡಿ ಮಾಡಕೂಡದು. ಅಡ್ಡಿ ಮಾಡಿದರೆ ಅದು ಲೇಖಕನ ಅಥವಾ ಲೇಖಕಿಯ ದೌರ್ಬಲ್ಯ ಅಷ್ಟೇ. ಸಂವೇದನೆಗಳು ಪ್ರಾಮಾಣಿಕವೂ ತೀವ್ರವೂ ಆಗಿದ್ದಾಗ ಸೃಜನಶೀಲ ಅಭಿವ್ಯಕ್ತಿಗೆ ಯಾವುದೇ ಬಾಹ್ಯಕಾರಣಗಳು ಅಡ್ಡಿಯಾಗಲಾರವು.

ಗಂಗಾ: ಪ್ರಾರಂಭದ ಕಥೆಗಳಲ್ಲಿ ನಿಮ್ಮ ಕಥಾನಾಯಕಿಯರು ದಿಟ್ಟರು, ಯಾತಕ್ಕೂ ಹಿಂಜರಿಯದವರು, ಯಾರಿಗೂ ಅಂಜದವರು, ಆದರೆ ನಂತರದ ಕಥೆಗಳಲ್ಲಿ ಬರುವ ಪಾತ್ರಗಳು ತಮ್ಮ ಹೋರಾಟದಲ್ಲಿ ಹೊಂದಾಣಿಕೆ ಮಾಡಿಕೊಳ್ಳುತ್ತವೆ. ಕೆಲವು ಬಾರಿ ಯಥಾಸ್ಥಿತಿಯನ್ನು ಒಪ್ಪಿಕೊಳ್ಳುತ್ತವೆ. ಇದು ಒಂದು ರೀತಿಯಲ್ಲಿ ಪಲಾಯನವಾದ ಅಲ್ಲವೆ?

ವೀಣಾ : ಒಂದು ಘಟ್ಟದಲ್ಲಿ ನಾನು ಬರೆದ ಕತೆಗಳಲ್ಲಿ ಒಂದು ಸೋಲಿನ ಅರಿವು ಇದೆ. ಅದೆಂದರೆ, ಮಹಿಳೆ ಧರ್ಮವಂತಳಾಗಿದ್ದರೆ ಗಂಡನನ್ನು ಧಿಕ್ಕರಿಸುವವಳಾಗಿದ್ದರೆ, ಸಂಪ್ರದಾಯ ವಿರೋಧಿಯಾಗಿದ್ದರೆ, ನಮ್ಮ ಸಮಾಜ ಆಕೆಗೆ ನೆಮ್ಮದಿಯಾಗಿ ಇರಗೊಡುವುದಿಲ್ಲ ಎಂಬ ಸೋವು, ಏಕಾಂಗಿಯಾಗಿ ಅನ್ಯಾಯಗಳ ವಿರುದ್ಧ ಹೋರಾಡುವ ಮಹಿಳೆಯ ದಾರಿ ಇನ್ನೂ ಸುಗಮವಾಗಿಲ್ಲ. ಪರಿಪೂರ್ಣ ಮಹಿಳಾ ಸ್ವಾತಂತ್ರ್ಯಕ್ಕೆ ಕಾಲವಿನ್ನೂ ಪಕ್ವವಾಗಿಲ್ಲ. ಆಕೆ ಹೊಂದಾಣಿಕೆ ಮಾಡಿಕೊಳ್ಳಬೇಕು ಅಥವಾ ಪರಿತ್ಯಕ್ತೆಯಾಗಿ ತನ್ನ ತತ್ವಗಳೊಂದಿಗೆ ಬದುಕಿರಬೇಕು ಹೋರಾಡಿ ಜಯಗಳಿಸಿಯೂ ಸುಖಿಯಾಗಿರುವ ಭಾಗ್ಯ ತೀರಾ ಕಡಿಮೆ ಮಹಿಳೆಯರಿಗಿದೆ. ಉಳಿದವರನ್ನು ಸಮಾಜ ಒತ್ತಾಯದಿಂದ ಹೊಂದಾಣಿಕೆ ಮಾಡಿಕೊಳ್ಳಲು ಹಚ್ಚುತ್ತದೆ. ಸಮಾಜ ಒತ್ತಾಯದಿಂದ ಹೊಂದಾಣಿಕೆ ಮಾಡಿಕೊಳ್ಳಲು ಹಚ್ಚುತ್ತದೆ. ಇವರು ಹೇಡಿಗಳಲ್ಲ, ಅಂಜು ಬುರುಕರಲ್ಲ. ಪಲಾಯನಾವಾದಿಗಳಲ್ಲ. ಕಟುವಾಸ್ತವದ ಅರಿವುಳ್ಳವರು ಸೋತವರಲ್ಲ. ಪಕ್ವತೆ ಹೊಂದಿದವರು.



# ಒಂದು ನಿಟ್ಟುಸಿರು (ಸಣ್ಣ ಕಥೆ)

*(ಪಂಜಾಬಿ) ಮೂಲ: ಅಮೃತಾ ಪ್ರೀತಮ್*

*ಕನ್ನಡಕ್ಕೆ : ಡಾ.ಆರ್. ಲಕ್ಷ್ಮೀನಾರಾಯಣ*

ಕರಮೋ ತಂಬಿಗೆಗೆ ಲಸ್ಸಿಯನ್ನು ಸುರುವಿದಳು. ಮತ್ತೆ ಅರ್ಧಕ್ಕಿಂತಲೂ ಕಡಿಮೆ ತುಂಬಿದ್ದ ತಂಬಿಗೆಯನ್ನು ನೋಡುತ್ತ ಹೇಳಿದಳು– "ಇವತ್ತು ದೊಡ್ಡ ಸರದಾರಿಣಿ ಎಲ್ಲೂ ಕಾಣಿಸ್ತಾ ಇಲ್ಲ! ಸಂತೋಷದಿಂದ ಇದ್ದಾಳೋ ಹೇಗೆ?"

ಸರದಾರಿಣಿ ನಿಹಾಲ್‌ಕಾರ್ ಈಗ ತಾನೆ ಒಂದು ಗಂಟೆ ಮುಂಚೆ ಅಂಗಳಕ್ಕೆ ಬಂದಿದ್ದಳು. ಒಲೆ ಮೇಲಿಟ್ಟಿದ್ದ ಖೀರ್‌ನ ಕೆಳಗೆ ಧಗಾಲ್ ಭಗಾಲ್ ಉರಿ ನೋಡಿ ಸೌದೆಗಳನ್ನು ಹಿಂದಕ್ಕೆ ಎಳೆದಿದ್ದಳು– "ಯಾಕಮ್ಮ ಪೀರೋ ಖೀರನ್ನು ಯಾವತ್ತಾದರೂ ಇಷ್ಟು ದೊಡ್ಡ ಉರಿ ಮೇಲಿಡ್ತಾರಾ? ಇದರ ಕೆಳಗೆ ತುಂಬಾ ತೆಳ್ಳನೆ ಉರಿ ಇರಬೇಕು" ಹಾಗೆಂದು ಹೇಳಿ ಒಲೆಯ ಹತ್ತಿರ ಸೌದೆ ಹಾಕಿಕೊಂಡು ಅದರ ಮೇಲೆ ಕೂತುಕೊಂಡು ಖೀರಿನ ಪಾತ್ರೆಯಲ್ಲಿ ಸೌಟು ಆಡಿಸತೊಡಗಿದ್ದಳು. ಬೆಳಿಗ್ಗೆ ಸ್ವತಃ ಅವಳೇ ಮೊಸರನ್ನು ಕಡೆದಿದ್ದಳು. ಆದರೆ ಲಸ್ಸಿಯನ್ನು ಸೋಸುವಾಗ ಪಿರೋಗೆ ಅವಳು ಈಗ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದು ಕೊಳ್ಳಬಹುದೆಂದು ಹೇಳಿದ್ದಳು. ಯಾರೇ ಬಂದರೂ ಅವರಿಗೆ ಲಸ್ಸಿ ಕೊಡುವುದೆಂದು ಪೀರೋಗೆ ಹೇಳಿದ್ದಳು.

ಬಹುತಃ ಬೇರೆಯವರು ಲಸ್ಸಿ ತೆಗೆದು ಕೊಳ್ಳುವಾಗ ಈ

ಮಾತನ್ನು ಕೇಳದ್ದರು. ಆದರೆ ನಿಹಾಲ್‌ಕೌರ್‌ಗೆ ಗೊತ್ತಿರಲಿಲ್ಲ. ಅವಳು ಒಳಗಿನ ಕೋಣೆಯಲ್ಲಿದ್ದಳು. ಆದರೆ ಈಗ ಅವಳು ಅಂಗಳದಲ್ಲಿದ್ದಳು. ಹೊಸ್ತಿಲುಗಳ ಆಚೆ ಕುಳಿತಿದ್ದ ಕರಮೋಳ ದನಿಯನ್ನು ಅವಳೇ ಸ್ವತಃ ಕೇಳಿ ಕೊಂಡಿದ್ದಳು.

"ನಾನು ಖುಷಿಯಾಗಿದ್ದೀನಿ ಕರಮೋ! ನೀನು ಸರಿಯಾಗಿದ್ದೀ ತಾನೆ?" ನಿಹಾಲ್‌ಕೌರ್ ಒಳಗಡೆಯಿಂದ ಕೇಳಿದಳು.

ಕರಮೋ ಬೇಗನೆ ಹೊಸ್ತಿಲ ಬಳಿ ಹೋಗಿ ಒಳಗೆ ಬಾಗುತ್ತ, ತನ್ನ ಒಂದು ಕೈಯಿಂದ ಹಣೆಯನ್ನು ಮುಟ್ಟಿಕೊಳ್ಳುತ್ತ ಹೇಳಿದಳು. "ಚೆನ್ನಾಗಿರು ಸರದಾರಿಣಿ ಈ ಹೊತ್ತು ನಿನ್ನನ್ನು ನೋಡಿರಲಿಲ್ಲ. ನನ್ನ ಸರದಾರಿಣಿ ಹುಷಾರಾಗಿದ್ದಾಳೆ ತಾನೆ ಎಂದು ಅಂದುಕೊಂಡಿದ್ದೆ."

ಎಲ್ಲರೂ ನಿಹಾಲ್‌ಕೌರಳ ಕಷ್ಟವನ್ನು ತಾವು ಹೊತ್ತು ಕೊಳ್ಳುತ್ತಿದ್ದರು. ಇದೇನೂ ಹೊಸದಲ್ಲ, ಲಸ್ಸಿ ತೆಗೆದುಕೊಳ್ಳುತ್ತಿದ್ದ ಹಾಗೇ ಕರಮೋ ಅವಳನ್ನು ನೆನೆಸಿಕೊಂಡಿದ್ದಳೆಂದರೆ, ಏನೋ ವಿಷಯ ಇರಲೇ ಬೇಕು ಎಂದು ನಿಹಾಲ್ ಕೌರಳಿಗೆ ಅನ್ನಿಸಿತು. ನಿಹಾಲ್‌ಕೌರ್, ಕರಮೋಳ ಕಡೆ ನೋಡಿದ ಕೂಡಲೇ ಅವಳು ತಂಬಿಗೆಯನ್ನು ನಿಹಾಲ್‌ಕೌರ್‌ಳ ಕಡೆಗೆ ವಾಲಿಸಿಕೊಂಡು ನಿಂತಿದ್ದಳು. ನಿಹಾಲ್‌ಕೌರ್‌ಳಿಗೆ ಅರ್ಥವಾಗಿ ಬಿಟ್ಟಿತು. ಅವಳು ವಿರೋಳ ಕಡೆಗೆ ನೋಡುತ್ತ ಹೇಳಿದಳು– "ಕೇಳು! ಕರಮೋಳ ತಂಬಿಗೆಯನ್ನು ತುಂಬಿಸುತ್ತಾ ಇರು. ಇವಳ ಹಸುಳೆಗಳು ಲಸ್ಸೀ ಕುಡಿದೇ ಬೆಳೆಯುತ್ತವೆ"

"ದೇವರು ನಿನಗೆ ದುಪ್ಪಟ್ಟು ನೀಡಲಿ! ನಿನ್ನ ಕೈಗಳಿಗೆ ಅದೆಷ್ಟೊಂದು ಸಂತೋಷವಾಗಿದೆಯೆಂದರೆ, ಅವು ತಮಗೇ ಗೊತ್ತಿಲ್ಲದ ಹಾಗೇನೆ ಎರಡೆರಡು ಸಲ ಲಸ್ಸಿ ತುಂಬಿಸುತ್ತವೆ." ತಂಬಿಗೆಯಲ್ಲಿ ಇನ್ನಷ್ಟು ಲಸ್ಸಿ ತುಂಬಿಸಿಕೊಳ್ಳುತ್ತ ಕರಮೋ ಹೇಳಿದಳು. ಅವಳಿಗೆ ಸಂತೃಪ್ತಿಯನ್ನು ನೀಡುತ್ತಿರುವ ಕೈಗಳು ವೀರೋಳದ್ದಾಗಿರಬಹುದು. ಆದರೆ ಅವಳು ಹೇಳುತ್ತಾ ಇದ್ದದ್ದು ನಿಹಾಲ್‌ಕೌರ್‌ಳ ಕೈಗಳ ಬಗ್ಗೆ ಕರಮೋ ಹೊರಟು ಹೋದ ಮೇಲೆ, ನಿಹಾಲ್‌ಕೌರ್ ಅವಳು ಹೇಳಿದ ಶುಭಾಶಂಸನೆಗಳನ್ನು ಮರೆತು ಬಿಟ್ಟಳು. ಆದರೆ ಅವಳು ಹೇಳಿದ "ದೊಡ್ಡ ಸರದಾರಿಣಿ" ಎಂಬ ಒಂದು ಶಬ್ದ ಮಾತ್ರ ಅವಳ ನೆನಪಿನಲ್ಲಿ ಉಳಿದು ಬಿಟ್ಟಿತು.

ಒಂದೇ ದಿನದಲ್ಲಿ ನಿಹಾಲ್‌ಕೌರ್ ಸರದಾರಿಣಿಯಿಂದ ದೊಡ್ಡ ಸರದಾರಿಣಿ ಆಗಿಬಿಟ್ಟಿದ್ದಳು. ಅವಳನ್ನು ದೊಡ್ಡ ಸರದಾರಿಣಿ ಎಂದು ಕರೆಯಬೇಕೆಂಬ ವಿಚಾರ ಎಲ್ಲರಿಗಿಂತ ಮೊದಲು ಯಾರಿಗೆ ಬಂದಿತ್ತೋ ಗೊತ್ತಿಲ್ಲ. ಬಹುಶಃ ಎಲ್ಲರಿಗೂ ಏಕಕಾಲಕ್ಕೆ ಬಂದಿತ್ತು. ಮನೆಗೆಲಸದವಳಿಂದ ಹಿಡಿದು ಕಾರ್ಖಾನೆಯ ಎಲ್ಲ ಕಾರಕೂನರವರೆಗೆ ಅವಳನ್ನು ದೊಡ್ಡ ಸರದಾರಿಣಿ ಎಂದು ಕರೆಯ ತೊಡಗಿದ್ದರು. ಅದು ಎಲ್ಲಿಯವರೆಗೆ ಹೋಯಿತೆಂದರೆ ಮನೆಯ ಯಜಮಾನ ಸರದಾರನೂ ನಿನ್ನೆ ಅವಳನ್ನು ದೊಡ್ಡ

ಸರದಾರಿಣಿ ಎಂದು ಅವಳನ್ನು ಕರೆದಿದ್ದನು ಆಮೇಲೆ ಚಿಕ್ಕ ಸರದಾರಿಣಿಯನ್ನು ಅವಳ ಕೋಣೆಗೆ ಹೋಗಿ ಕರೆದುಕೊಂಡು ಬಾ ಎಂದು ತಾನೇ ಮನೆ ಗೆಲಸದವಳಿಗೆ ಹೇಳಿದ್ದು ನಿಹಾಲ್‌ಕೌರ್‌ಳ ಮನಸ್ಸಿಗೆ ಬಂದಿತು. ಒಂದು ವೇಳೆ ಚಿಕ್ಕ ಸರದಾರಿಣಿ ಅಂತ. ಯಾರಾದರೂ ಇದ್ದರೆ, ದೊಡ್ಡ ಸರದಾರಿಣಿ ತಾನೇ ಆಗುತ್ತಿದ್ದಳೂ ಇನ್ನೂ ಎಷ್ಟೋ ವಿಚಾರಗಳು. ಚಿಕ್ಕ ಚಿಕ್ಕ ಕಾಳುಗಳ ಹಾಗೆ. ಅವಳ ಮನಸ್ಸಿನ ಎಸರಿಯಲ್ಲಿ ಕುದಿಯತೊಡಗಿದ್ದುವೆಂದು ನಿಹಾಲ್‌ಕೌರಳಿಗೆ ಅನ್ನಿಸತೊಡಗಿತು.

ಹಾಗೆ ಮನಸ್ಸಿನಲ್ಲಿ ಕೊಳ್ಳುದಿಗೊಳ್ಳುತ್ತಿದ್ದ ವಿಚಾರಗಳಲ್ಲಿ, ವೀರೋ ಈ ಮನೆಗೆ ಕಿರಿಯ ಸೊಸೆಯಾಗಿ ಬಂದ ದಿನದಿಂದಲೂ ಅವಳು ರಾತ್ರಿ ಮಲಗುವ ಮುನ್ನ ನಿಯಮದಂತೆ ಒಂದು ದಿನವೂ ತಪ್ಪದ ಹಾಗೆ ನಿಹಾಲ್‌ಕೌರ್‌ಳ ಕೋಣೆಗೆ ಒಂದು ಅವಳು ಕುಳಿತಿದ್ದ ಚಿಕ್ಕ ಪಲ್ಲಂಗದ ಕಾಲಿನ ಬಳಿ ಕುಳಿತು ಅವಳ ಕಾಲುಗಳನ್ನು ಒತ್ತುತ್ತಿದ್ದ ವಿಚಾರವೂ ಒಂದು. ನಿಹಾಲ್‌ಕೌರಳಂತೂ ಮಗಳ ತೊಟ್ಟಿಲನ್ನು ಕಳಿಸುವುದಾಗಲಿ, ಮಗನ ತೊಟ್ಟಿಲನ್ನು ತರುವುದಾಗಲಿ ಮಾಡಿರಲಿಲ್ಲ. ಆದರೆ ಅವಳು ಕೈಯಾರೆ ಮದುವೆ ಮಾಡಿಸಿದ್ದ ವೀರೋ ಅವಳ ಕಾಲುಗಳನ್ನು ಒತ್ತುತ್ತಿದ್ದರೆ ಅವಳಿಗೆ ತನಗೆ ಮಗಳು, ಸೊಸೆ ಇಬ್ಬರೂ ಸಿಕ್ಕಿಬಿಟ್ಟರು ಎನಿಸುತ್ತಿತ್ತು. ಹಾಗಾಗಿ ನಿಹಾಲ್‌ಕೌರಳು ಒಂದು ದೀರ್ಘವಾದ ಉಸಿರು ತೆಗೆದುಕೊಂಡು ನಗುವ ತುಟಿಗಳಿಂದ, ವೀರೋ ತನಗೆ ಸೊಸೆಯೂ ಹೌದು, ಮಗಳೂ ಹೌದು ಎಂದು ತನಗೆ ಸಮಾಧಾನ ತಾಳುತ್ತಿದ್ದಳು.

ತನ್ನ (ಪತಿ) ಸರದಾರನ ಎರಡನೇ ಮದುವೆಗೆ ಈ ಹುಡುಗಿ ವೀರೋಳನ್ನು ಸ್ವತಃ ನಿಹಾಲ್‌ಕೌರಳೇ ಹುಡುಕುತ್ತಿದ್ದಳು. ಸಂಬಂಧಗಳು ಒಳ್ಳೆಯ ಮನೆಗಳಿಂದ ಒದಗಿ ಬರುತ್ತಿದ್ದವು. ಆದರೆ ಎಲ್ಲ ಸರದಾರರಿಗು ಒದಗಿ ಬರುತ್ತಿರಲಿಲ್ಲ. ಅವು ಸರದಾರನ 'ದೊಡ್ಡ ಮನೆ'ಯ ಕಾರಣದಿಂದಾಗಿ, ಸರದಾರನಿಗೆ ವಯಸ್ಸಾಗುತ್ತಿರುವ ಕಾರಣದಿಂದ ಹೆದರುತ್ತ ಸಂಬಂಧದ ಪ್ರಸ್ತಾಪ ತೆಗೆದುಕೊಂಡು ಬರುತ್ತಿದ್ದವರು ಸಂಬಂಧ ಬೆಳೆಸುವುದಕ್ಕಿಂತ ಮೊದಲು ಮನೆ (ತನ)ಯನ್ನು ತಮ್ಮ ಮಗಳ ಹೆಸರಿಗೆ ಮಾಡಿಕೊಳ್ಳ ಬಯಸುತ್ತಿದ್ದರು. ತನ್ನ ಮನೆಯ ಹಕ್ಕುದಾರನನ್ನಂತು ಸರದಾರ ಖಂಡಿತವಾಗಿಯೂ ಹುಡುಕುತ್ತಿದ್ದನು. ಆದರೆ ವಾರಸುದಾರನೊಬ್ಬನಿಗೆ ಹೆಣ್ಣೊಬ್ಬಳು ಅದ್ಯಾವಾಗ ಜನ್ಮ ನೀಡುವುದಿತ್ತೋ ಏನೋ, ಸದ್ಯದಲ್ಲಂತೂ ಕೇವಲ ಕಣ್ಣಿನುಡಿಯ ಬಹುದಾಗಿದ್ದ ಹೆಣ್ಣಿನ ಹೆಸರಿಗಂತೂ ಬರೆಯಲಾಗುತ್ತಿರಲಿಲ್ಲ.

ಅಲ್ಲದೆ ಸರದಾರನಂತೂ ಎರಡನೇ ಮದುವೆ ಮಾಡಿಕೊಳ್ಳಲು ನಿರಾಕರಿಸಿದ್ದನು. ಆದರೆ ಈ ನಿರಾಕರಣೆಯಲ್ಲೊಂದು ನೆಮ್ಮದಿಯ ನಿಟ್ಟುಸಿರು ಸೇರಿತ್ತು. ನಿಹಾಲ್‌ಕೌರ್ ಈ ನಿಟ್ಟುಸಿರನ್ನು ಕೇಳಿಸಿಕೊಂಡಿದ್ದಳು. ಹಾಗೂ ಈ ರೀತಿಯಲ್ಲಿ ಅವಳು ಒಂದು ಯಃಕಶ್ಚಿತ್ ಕುಟುಂಬದ ಹೆಣ್ಣಾದ ಈ ವೀರೋಳನ್ನು ಹುಡುಕಿತಂದು ತನ್ನ ಸರದಾರನಿಗೆ ನೀಡಿದ್ದಳು.

ಅದಕ್ಕೆ ಪ್ರತಿಯಾಗಿ ಸ್ವತಃ ತಾನೇ ಅವನ ಆ ನೆಮ್ಮದಿಯಿಂದ ನಿಟ್ಟುಸಿರನ್ನು ಬಿಟ್ಟಿದ್ದಳು. ಸರದಾರನು ಒಂದು ದಿನ.... ಗೋಡೆಗೆ ಹಚ್ಚಿದ್ದ ತನ್ನ ಕಬ್ಬಿಣದ ಅಲಮಾರನ್ನು ತೆರೆದಾಗ, ಆ ತೆರೆದ ಬೀರುವಿನ ಎದುರು ಅದೆಷ್ಟೋ! ಹೊತ್ತು ನಿಂತು. ಏನೋ ಯೋಚಿಸುತ್ತಿದ್ದನು. "ದೊಡ್ಡ ಸರದಾರಿಣಿ ಎಲ್ಲಿ ಹೋಗಿದ್ದಾಳೆ?" ಎಂದು ಸರದಾರನು ವೀರೋಳನ್ನು ಅವಸರಅವಸರವಾಗಿ ಕೇಳಿದನು. ದೊಡ್ಡ ಸರದಾರಿಣಿ ಮನೆಯಲ್ಲಿರಲಿಲ್ಲ. ಸರದಾರನು ಅಲಮಾರಿಗೆ ಬೀಗಹಾಕಿ ಮುಚ್ಚಿ ಬೀಗದ ಕೈಯನ್ನು ಜೇಬಿನಲ್ಲಿರಿಸಿ ಕೊಂಡನು. ಕಾರ್ಖಾನೆಗೆ ಹೋಗುವಾಗ, ನಿಹಾಲಕೌರ್ ಮನೆಗೆ ಬಂದ ಕೂಡಲೇ, ಕೆಳಗಡೆ ಇರುವ ಗುಮಾಸ್ತೆ ಮೂಲಕ ತನಗೆ ಹೇಳಿಕಳಿಸಿ ಕಾರ್ಖಾನೆಯಿಂದ ಕರೆಸಿಕೊಳ್ಳಬೇಕೆಂದು ವೀರೋಳಿಗೆ ಹೇಳಿದನು. ನಿಹಾಲಕೌರ್ ಮನೆಗೆ ಹಿಂತಿರುಗಿದಾಗ, ವೀರೋ ಹೊರಗಡೆ ಬಾಗಿಲ ಹತ್ತಿರ ಗಾಬರಿಗೊಂಡು ಕುಳಿತಿದ್ದಳು. ಅವಳು ಅದೇ ತಾನೆ ವಾಂತಿಮಾಡಿಕೊಂಡಿದ್ದಳು.

ನಿಹಾಲ್‌ಕೌರ್ ವೀರೋಳ ಕೈಹಿಡಿದು ಎಬ್ಬಿಸಿ ಭುಜವನ್ನು ಅದುಮಿ ಹಿಡಿದು ಮಂಚದ ಮೇಲೆ ಮಲಗಿಸಿದಳು. ಆದರೆ ವೀರೋ ನಡುಗುತ್ತ "ನಾನು ನಿಮ್ಮ ಮಗಳೂ ಹೌದು ಸೊಸೆಯೂ ಹೌದು ಅಂತ ನೀವು ನನಗೊಂದು ದಿವಸ ಹೇಳಿದ್ರಿ. ಈ ಹೊತ್ತು ನನ್ನನ್ನು ನಿಮ್ಮ ಮಗಳು ಅಂತ ತಿಳಿದು, ಬೇಕಾದರೆ ಸೊಸೆ ಅಂತಲೂ ಭಾವಿಸಿ ನನ್ನನ್ನು ಕಾಪಾಡಿ" ಎಂದು ವೀರೋ ಬಿಕ್ಕತೊಡಗಿದಳು. ಬಿಕ್ಕಿ ಬಿಕ್ಕಿ ಅಳುತ್ತ, ಕೆಲವು ದಿನಗಳ ಹಿಂದೆ, ಅವಳ ಅಣ್ಣ ಅವಳನ್ನು ನೋಡಿಕೊಂಡು ಹೋಗಲು ಬಂದಾಗ, ಅವಳ ಅಣ್ಣನಿಗೆ ಸ್ವಲ್ಪ ಹಣದ ಅವಶ್ಯಕತೆ ಇತ್ತು. ವೀರೋ ಅವನಿಗೆ ಸ್ವಲ್ಪ ಹಣವನ್ನೂ ಕೊಟ್ಟಿದ್ದಳು. ಅವಳ ಹತ್ತಿರ, ಇದ್ದ ಹಣ ತುಂಬ ಕಡಿಮೆ. ಹಾಗಾಗಿ ಅವಳು ಸರದಾರನ ಜೇಬಿನಿಂದ ಬೀಗದ ಕೈ ಕದ್ದುಕೊಂಡು, ಕಬ್ಬಿಣದ ಬೀರು ತೆಗೆದು ಅದರೊಳಗಿದ್ದ ಬೆಳ್ಳಿಯ ಪಾತ್ರೆಗಳನ್ನು ತನ್ನ ಅಣ್ಣನಿಗೆ ಕೊಟ್ಟೆನೆಂದು ನಿಹಾಲ್ ಕೌರಳಿಗೆ ಹೇಳಿದನು.

"ಇದು ನಿನ್ನ ಸ್ವಂತ ಮನೆ ವೀರೋ! ಒಂದು ವೇಳೆ ನೀನೇ ನಿನ್ನ ಕಯ್ಯಾರೆ ನಿನ್ನ ಮನೆಯನ್ನು ಹಾಳು ಮಾಡಕ್ಕೆ ಹೊರಟರೆ......" ಆ ಮಾತುಗಳು ಇನ್ನೂ ನಿಹಾಲ್‌ಕೌರಳ ಬಾಯಲ್ಲೇ ಇದ್ದುವು. ಅಷ್ಟರಲ್ಲಿ ವೀರೋ ಉದ್ವೇಗದಿಂದ ಹೇಳಿದಳು- "ಈ ಮನೆ ನನ್ನದು ಅಂತ ಎಂದೂ ತಿಳ್ಕಿಲ್ಲ: ಅನ್ನಿಸೋದೂ ಇಲ್ಲ. ಆದರೆ ಸರದಾರಿಣಿ ಅಮ್ಮ ನಾನು ಇನ್ನು ಮುಂದೆ ಯಾವತ್ತೂ ಈ ಮನೆಯ ಏನೊಂದು ಸಾಮಾನನ್ನೂ ಹೊರಗಡೆ ಕೊಡೋದಿಲ್ಲ ಅಂತ ಆಣೆ ಮಾಡಿ ಹೇಳ್ತೀನಿ. ನಾನು ಆ ಹೊತ್ತು ತಪ್ಪು ಮಾಡಿದ್ದೆ, ಹೀಗೇ ಮಾಡಿಬಿಟ್ಟೆ. ಆಮೇಲೆ ಪಶ್ಚಾತ್ತಾಪನೂ ಪಟ್ಟಿದ್ದೆ. ನನ್ನ ಮದುವೆ ಸಮಯದಲ್ಲಿ ನಮ್ಮ ತಂದೆ ತಮ್ಮ ಅಣ್ಣನ ವ್ಯಾಪಾರ-ವ್ಯವಹಾರದ ಸಲುವಾಗಿ ನಿಮ್ಮ ಹತ್ತಿರ ಎರಡು ಸಾವಿರೂಪಾಯಿ ಕೇಳಿದ್ದು ನಿಮಗೆ ಗೊತ್ತೇ ಇದೆ. ನೀವು ಅದನ್ನು ಕೊಟ್ಟಿದ್ದಿರಿ. ನಮ್ಮಪ್ಪ

ಮದುವೆ ಮಾಡಿಕೊಟ್ಟು ಬಿಟ್ಟ. ನನ್ನನ್ನು ಮಾರೋದಕ್ಕೆ ಇನ್ನೇನು ತಾನೆ ಕಮ್ಮಿಯಾಗಿತ್ತು? ಎರಡು ಸಾವಿರ ರೂಪಾಯಿಗೆ ಈ ಮುದಿ ಗೂಟಕ್ಕೆ ನನ್ನನ್ನು ಕಟ್ಟಿಬಿಟ್ಟರು. ಅಪ್ಪ, ಅಣ್ಣ ಅನ್ನೋ ಸಂಬಂಧ ಇನ್ನೇನು ಉಳಿತು–ನಾನು ಯಾರದ್ದೋ ಮನೆ ಹಾಳು ಮಾಡಿ ಅವನ ಮನೆಯಾಕೆ ತುಂಬಿಸಲಿ?"

"ವೀರೋ!....." ನಿಹಾಲ್‌ಕೌರ್ ಬೆಚ್ಚಿಬಿದ್ದು ವೀರೋಳ ಮುಖ ನೋಡತೊಡಗಿದಳು.

ನಿಹಾಲ್‌ಕೌರ್ ವೀರೋಳ ಮರ್ಯಾದೆ ಉಳಿಸಿದಳು. ಅಲಮಾರಿನಲ್ಲಿ ಇರಿಸಿದ್ದ ಬೆಳ್ಳಿಯ ಪಾತ್ರೆಗಳು ಹಳೆಯ ಮಾದರಿಯವಾಗಿದ್ದರಿಂದ ಅವಳೇನೇ ಆ ಪಾತ್ರೆಗಳನ್ನೆಲ್ಲ ತೆಗೆದು, ಅದಕ್ಕೆ ಇನ್ನೂ ಸ್ವಲ್ಪ ಬೆಳ್ಳಿ ಸೇರಿಸಿ ಹೊಸ ಪಾತ್ರೆ ಮಾಡಿಸಲು ಅಕ್ಕಸಾಲಿಗೆ ಕೊಟ್ಟಿದ್ದಾಗಿ ಸರದಾರನಿಗೆ ಹೇಳಿ ಬಿಟ್ಟಳು.

ಸರದಾರನ ಚಿಂತೆ ದೂರವಾಗುತ್ತಾ ಹೋಯಿತು. ಆದರೆ ನಿಹಾಲ್‌ಕೌರ್ ವೀರೋಳ ಮುಖದ ಕಡೆ ನೋಡಿದರೆ, ಈಗಲೂ ಅವಳ ಮನಸ್ಸಿನಲ್ಲಿ ಒಂದು ಚಿಂತೆ ಮನೆ ಮಾಡುತ್ತದೆ. ವೀರೋಳ ಕಣ್ಣುಗಳು ಕಪ್ಪುದುಂಬಿಗಳಂತಿದ್ದುವು. ಬಣ್ಣ ಸ್ವಲ್ಪ ಶ್ಯಾಮಲವರ್ಣ. ಆದರೆ ಆ ಶ್ಯಾಮಲ ವರ್ಣದಲ್ಲಿ ಯೌವನವೆಂಬುದು ಬನಿಯಾದ ಹಿಟ್ಟಿನ ಹಾಗೆ ಮಿಳಿತವಾಗಿ ಬಿಟ್ಟಿತ್ತು. ಅವಳ ಬಾಹುಗಳು ಲಟ್ಟಣಿಗೆಗಳ ಹಾಗೆ ದುಂಡಾಗಿ ಮತ್ತು ಬಲಿಷ್ಠವಾಗಿದ್ದವು. ಅವಳ ಮಾಂಸಲ ದೇಹದಲ್ಲಿ ಬೆರಳಿನ ಒಂದು ಗೆಣ್ಣೂ ಇಳಿಯುತ್ತಿರಲಿಲ್ಲ. ಸರದಾರನ ಕಡೆಯಿಂದ ಯಾವ ನೆಮ್ಮದಿಯ ನಿಟ್ಟುಸಿರಿನ... ಹೊಣೆಯನ್ನು ತಾನು ಹೊತ್ತು ಕೊಂಡಿದ್ದಳೋ ವೀರೋ ಅದೇ ನೆಮ್ಮದಿಯ ನಿಟ್ಟುಸಿರನ್ನು ತನ್ನ ಎದೆಯಲ್ಲಿ ಇರಿಸಿದ್ದಳು.

ವೀರೋ ಗರ್ಭಿಣಿಯಾದಳು. ಮನೆ ಬಹಳ ದೊಡ್ಡದಾಗಿ ಆದರೆ ಶುಭಕಾಮನೆಗಳಾವರೋ ಮನೆಯಲ್ಲಿ ಹಿಡಿಸಲಾರದಷ್ಟು ಅಸಂಖ್ಯಾತವಾಗಿದ್ದವು. ಸರದಾರನ ಕಾಲು ನೆಲದ ಮೇಲೆ ನಿಲ್ಲುತ್ತಲೇ ಇರಲಿಲ್ಲ. ಅಲ್ಲದೆ ನಿಹಾಲ್‌ಕೌರ್ ವೀರೋ ನೆಲದ ಮೇಲೆ ಹೆಜ್ಜೆ ಊರಲು ಬಿಡುತ್ತಿರಲಿಲ್ಲ. ಆದರೆ ಜನರು, ನಿಹಾಲ್‌ಕೌರ್‌ಳಿಗೆ ನೀಡಿದಷ್ಟು ಶುಭ ಕಾಮನೆಗಳನ್ನು ಸರದಾರನಿಗಾಗಲಿ ವೀರೋಳಿಗಾಗಲಿ ನೀಡಲಿಲ್ಲ.

"..... ಮಗು ಹುಟ್ಟುತ್ತಿದ್ದ ಹಾಗೆ ನಾನು ಇದನ್ನು ನನ್ನ ಮಡಿಲಲ್ಲಿ ಹಾಕಿಕೊಂಡು ಬಿಡಲೇ?.... ಆಮೇಲೆ ಆಗಲ್ಲ ಅಂತ ಹೇಳಕೂಡದು....... ನಾನು ದೊಡ್ಡ ಸರದಾರಿಣಿ. ನೀನು ಚಿಕ್ಕ ಸರದದಾರಿಣಿ. ಮೊದಲನೇ ಮಗ ದೊಡ್ಡವಳಿಗೆ ಸೇರಿದವನು ಅನಂತರ ಹುಟ್ಟಿದವರು ನಿನ್ನವರು....." ಎಂದು ನಿಹಾಲ್‌ಕೌರ್ ವಿರೋಳೊಂದಿಗೆ ನಗುತ್ತ ಹೇಳುತ್ತಿದ್ದಳು. ತನ್ನ ಮನಸ್ಸಿಗೆ ಕಿಂಚಿತ್ತಾದರೂ ಬೇಸರ ಅದೇಕೆ ಆಗುತ್ತಿಲ್ಲವೆಂದು ಸ್ವತಃ

ನಿಹಾಲ್‌ಕೌರ್‌ಳಿಗೆ ಅರ್ಥವಾಗುತ್ತಿರಲಿಲ್ಲ. ಅವಳು ತನ್ನ ಕೈಯಾರೆ ತನ್ನ ಪತಿಯನ್ನು ಬೇರೊಬ್ಬ ಹೆಣ್ಣಿಗೆ ಕೊಟ್ಟು ಬಿಟ್ಟಿದ್ದಳು. ಇದೀಗ ಸಮಸ್ತ ಆಸ್ತಿಯನ್ನು ಬೇರೆಯವಳ ಮಗನಿಗೆ ಕೊಟ್ಟು ಬಿಟ್ಟಿದ್ದಳು.

"ಅರೆ ಮಾಟಗಾತಿ! ನಾನು ಅದು ಹೇಗೆ ನಿನ್ನನ್ನು ನನ್ನ ಮಗಳು ಮತ್ತು ಸೊಸೆ ಎಂದು ಹೇಳಿಬಿಟ್ಟಿದ್ದೆ! ಈಗ ನಾನು ನಿಜಕ್ಕೂ ಒಬ್ಬ ತಾಯಿಯ ಹಾಗೆ ಸಂತೋಷವಾಗಿದ್ದೀನಿ."

"ನನಗೆ ಯಾವತ್ತೂ ಜ್ಞಾಪಕವೇ ಇಲ್ಲ ನೋಡು ನೀನು ನನ್ನ....." ನಿಹಾಲ್‌ಕೌರಳ ಈ ಮಾತಿಗೆ ಮಧ್ಯದಲ್ಲಿಯೇ ನಕ್ಕು ಹೇಳುತ್ತಿದ್ದಳು. "ಸರದಾರಿಣಿ! ನಾನು ನಿಸ್ಸಂದೇಹವಾಗಿ ಬೇರೆ ಇನ್ನೇನೋ ಅನ್ನಿಸುತ್ತೇನೋ ಇಲ್ಲವೋ, ಆದರೆ ನಾನು ನಿಮ್ಮ ಸವತಿಯ ಹಾಗಂತೂ ಇಲ್ಲವೇ ಇಲ್ಲವೆಂದು ನಿಮಗೆ ಗೊತ್ತಿದೆ".

ನಿಹಾಲಾಕೌರಳು ಬಡಗಿಗೆ ಹೇಳಿ ತೊಟ್ಟಿಲು ಮಾಡಿಸಿದಳು. ಅದರಲ್ಲಿ ಬೆಳ್ಳಿಯ ಗೆಜ್ಜೆಗಳನ್ನು ಕಟ್ಟಿದಳು. ಒಳ್ಳೆ ರೇಶ್ಮೆಯ ಚಿಕ್ಕದೊಂದು ರಜಾಯಿಯನ್ನು ಮಾಡಿಸಿದಳು.

ನಗರದ ಬ್ರಿಟಿಷ್ ಅಧಿಕಾರಿಯೊಬ್ಬ ಒಂದು ತಿಂಗಳ ರಜೆ ಮೇಲೆ ವಿದೇಶಕ್ಕೆ ಹೋಗುತ್ತಿದ್ದನು. "ವಿದೇಶೀ ಸ್ವೆಟರ್‌ಗಳು ರೇಶ್ಮೆ ಸ್ವೆಟರ್‌ಗಳ ಹಾಗಿರುತ್ತವೆ" ಎಂದು ಹೇಳಿ ನಿಹಾಲ್‌ಕೌರ್ ಆ ಬ್ರಿಟಿಷ್ ಅಧಿಕಾರಿಗೆ ಎರಡು ಚಿಕ್ಕ ಚಿಕ್ಕ ಸ್ವೆಟರ್‌ಗಳನ್ನು ವಿದೇಶದಿಂದ ತರಬೇಕೆಂದು ಹೇಳಿ ಆ ಬಗ್ಗೆ ಅವನಿಂದ ಭರವಸೆಯನ್ನೂ ಪಡೆದಿದ್ದಳು.

ತಾನು ಬಸಿಷ್ಠೆಯಾಗಿದ್ದಾಗ, ನಿಹಾಲ್‌ಕೌರ್ ದಾದಿಗಳಿಗೆ ತನ್ನನ್ನು ತೋರಿಸಿಕೊಂಡಳು ಮತ್ತು ದೊಡ್ಡ ಪಟ್ಟಣಗಳಿಗೆ ಹೋಗಿ ಡಾಕ್ಟರುಗಳಿಗೂ ತೋರಿಸಿಕೊಂಡಳು. ಆದರೆ ತಾನು ಬಸಿಷ್ಠೆಯಾಗಿದ್ದ ದಿನಗಳಲ್ಲಿ ಎಂದೂ ದೇವತಾಕಾರ್ಯಗಳನ್ನು ಮಾಡಲಿಲ್ಲ. ವೀರೋಗಳಿಗೆ ಪೂರ್ತಿ ಮೂರುದಿನ ಸೊಂಟದಲ್ಲಿ ನೋವು ಕಾಣಿಸಿಕೊಳ್ಳುತ್ತಿದ್ದಾಗ ಮತ್ತೆ ಒಂದು ದಿನ ಸ್ವಲ್ಪ ರಕ್ತದ ಕಲೆಯೂ ಕಾಣಿಸಿಕೊಂಡಾಗ, ನಿಹಾಲ್‌ಕೌರಳು ಮೊದಲ ಬಾರಿಗೆ ತನ್ನ ಜೀವನದಲ್ಲಿ ಹಬ್ಬ ಮಾಡಿದಳು.

ಇದು ಬಯಕೆಯ ಸಮಯವಾಗಿತ್ತು. ವೀರೋ ಒಂದು ವೇಳೆ ಬಯಸಿದ್ದರೆ, ದೇಶ, ವಿದೇಶಗಳಿಂದ ತನಗೆ ಇಷ್ಟವಾದ ವಸ್ತುಗಳನ್ನು ತರಿಸಿಕೊಂಡು ಬಯಕೆಗಳನ್ನು ಈಡೇರಿಸಿಕೊಳ್ಳಬಹುದಿತ್ತು. ಸರದಾರನು ಈಗ ಅವಳ ಬಾಯಿಂದ ಬರುವ ದನಿಗಾಗಿ ಅವಳ ಮುಖವನ್ನೇ ನೋಡುತ್ತಿರುತ್ತಿದ್ದನು. ಆದರೆ ಉಪ್ಪಿನ ಕಾಯಿಯ ಒಂದು ಸಣ್ಣ ಹೋಳಿಗಾಗಿ. ಸಂಕೋಚದಿಂದ ಎರಡೆರಡು ಸಲ ತನ್ನ ಮುಖ ನೋಡುತ್ತಿದ್ದಳೆಂದು ನಿಹಾಲ್‌ಕೌರ್‌ಳಿಗೆ ಗೊತ್ತಿತ್ತು. ಹೀಗಾಗಿ ಸ್ವತಃ ನಿಹಾಲ್‌ಕೌರಳೇ ವೀರೋಳ ಬಯಕೆಗಳ

ನಿಗಾವಹಿಸುತ್ತಿದ್ದಳು. ಈ ಎಲ್ಲ ದಿನಗಳಲ್ಲಿ ವೀರೋ ತನ್ನ ಬಾಯಿಯನ್ನು ತೆಗೆದು ಜೋರಾಗಿ ಏನಾದರೂ ಮಾತು ಹೇಳಿದ್ದಾಳೆ ಅಂತ ಆದರೆ ಅದು ಅಂಗಳದಲ್ಲಿ ಹಗ್ಗದಿಂದ ನೇತು ಹಾಕಿರುವ ಶುಂಠಿ ಗಡ್ಡೆಗಳ ಹಾರವನ್ನು ಕಳಚಿ ಆ ಕಡೆ ಪಕ್ಕ ಇಡಿ ಎಂಬಷ್ಟು ಮಾತುಗಳನ್ನು ಮಾತ್ರ "ಇವುಗಳನ್ನು ನೋಡಿದರೆ ಮನಸ್ಸಿನಲ್ಲಿ ಏನೋ ಒಂಥರಾ ಆಗುತ್ತೆ. ಈ ಶುಂಠಿ ಗಡ್ಡೆಗಳನ್ನು ನೋಡಿದರೆ ಯಾವುದರದ್ದೋ ಚರ್ಮವನ್ನು ಸುಲಿದು ನೇತು ಹಾಕಿರೋ ಹಾಗೆ ಅನ್ನಿಸುತ್ತೆ" ಎಂದು ವೀರೋ ಹೇಳಿದ್ದಳು. ಅಲ್ಲದೆ ಒಣಗುತ್ತಿರುವ ಶುಂಠಿ ಗಡ್ಡೆಗಳನ್ನು ನೋಡುತ್ತಿದ್ದ ಹಾಗೆ ವಾಂತಿ ಮಾಡಿಕೊಳ್ಳುತ್ತಿದ್ದಳು.

ಅನಂತರ ವೀರೋಳ ಮನಸ್ಸಿಗೆ ಏನನ್ನಿಸಿತೊ ಅವಳಿಗೆ ಒಂಬತ್ತು ತಿಂಗಳು ನಡೀತಿದ್ದಾಗ, ತನ್ನ ತವರು ಮನೆಯಲ್ಲೇ ಬಾಣಂತನ ಮಾಡಿಸಿಕೊಳ್ಳುತ್ತೇನೆ ಎಂದು ಹಟ ಹಿಡಿದಳು. ಸರದಾರನು ಅವಳ ಹಟವನ್ನು ಒಪ್ಪುತ್ತಿರಲಿಲ್ಲ. ನಿಹಾಲ್‌ಕೌರ್ ಅವಳನ್ನು ಬೇಡಿಕೊಳ್ಳುತ್ತ ಇದ್ದಳು. ಆದರೆ ವೀರೋಳದ್ದು ಒಂದೇ ಹಟ; ಅವಳ ಊರಿನ ಒಬ್ಬ ಮುದಿ ಸೂಲಗಿತ್ತಿ ತುಂಬಾ ಅನುಭವಸ್ಥಳು. ತನಗೆ ಅವಳೊಬ್ಬಳ ಮೇಲೆ ಮಾತ್ರ ನಂಬಿಕೆ, ಬೇರೆ ಯಾರ ಮೇಲೂ ನಂಬಿಕೆ ಇಲ್ಲ,...... ತಾನೊಂದು ವೇಳೆ ಇಲ್ಲೇ ಇದ್ದದ್ದೇ ಆದರೆ, ನಗರದ ಲೇಡಿ ಡಾಕ್ಟರುಗಳ ಕೈಯಲ್ಲಿ ಸತ್ತು ಹೋಗುತ್ತೇನೆ ಎಂದು.

"ಈ ಭಯವೇ ಒಂದು ದೊಡ್ಡ ಖಾಯಿಲೆ" ಎಂದು ಡಾಕ್ಟರುಗಳೂ ಸರದಾರನಿಗೆ ತಮ್ಮ ಅಭಿಪ್ರಾಯ ತಿಳಿಸಿದರು. ಆದರೆ ಸರದಾರನ ಮನಸ್ಸಿನಲ್ಲಿ ಬೇರೊಂದೇ ಭಯವಿತ್ತು. ನಿಹಾಲ್‌ಕೌರಳನ್ನು ಬೇರೆಯಾಗಿ ಕರೆದು ಹೇಳಿದ– "ಅವಳಿಗೊಂದು ವೇಳೆ ಅಲ್ಲಿ ಹೆಣ್ಣು ಮಗು ಹುಟ್ಟಿದರೆ, ಅವಳು ಬೇರೆಯಾರದ್ದಾದರೂ ಗಂಡು ಮಗುವಿಗೆ ಅದನ್ನು ಬದಲಾಯಿಸಿಕೊಂಡು ಬಿಡುತ್ತಾಳೆ. ನಾನು ಈ ಮುಂಚೇನೂ ಇಂಥ ಸಂಗತಿಗಳನ್ನು ಕೇಳಿದ್ದೀನಿ. ಒಂದು ವೇಳೆ ಗಂಡು ಮಗು ಆದರೆ, ಅದು ದೊಡ್ಡದಾದ ಮೇಲೆ ಆಸ್ತಿಯ ವಾರಸುದಾರನಾಗುತ್ತಾನೆ ಎನ್ನುವ ದುರಾಸೆ ಇದೆ ಅವಳಿಗೆ"

"ಹಾಗಾದರೆ ಇದಕ್ಕಿರೋದು ಒಂದೇ ಉಪಾಯ. ನಾನು ಇವಳ ಜೊತೆ ಹೋಗಿ ಬಿಡ್ತೀನಿ ನಾನು ಹತ್ತಿರ ಇದ್ದರೆ ಅವಳೇನೂ ಮಾಡಕ್ಕಾಗಲ್ಲ"– ಎಂದು ನಿಹಾಲ್‌ಕೌರ್ ಸ್ವಲ್ಪ ಹೊತ್ತು ಯೋಚನೆ ಮಾಡಿ ಹೇಳಿದಳು.

ಸರದಾರನು ಇದಕ್ಕೆ ಒಪ್ಪಿದನು. ವೀರೋ ಕೂಡ ಇದಕ್ಕೆ ಏನೂ ಆಕ್ಷೇಪ ಮಾಡಲಿಲ್ಲ. ನಿಹಾಲ್‌ಕೌರಳ ಸೇವೆ ಮಾಡಲೆಂದು ಮನೆಯ ಕೆಲಸದವಳನ್ನು ಜೊತೆಗೆ ಕರೆದುಕೊಂಡಳು ಹಾಗೂ ವೀರೋಳ ಸಂಗಡ ಅವಳ ತೌರಿಗೆ ಹೋದಳು.

ವೀರೋಳ ಹೆರಿಗೆ ಕಷ್ಟವಾಗಲಿಲ್ಲ. ಅವಳು ತುಂಬು ಯೌವನವಂತೆ ಮತ್ತು ಆರೋಗ್ಯವಂತಳಾಗಿ ಇದ್ದಳು. ಅವಳ ತಾಯಿ ಮತ್ತು ಅತ್ತಿಗೆ ಅವಳಿಗೆ ನೆಟ್ಟಗೆ ತೆಗೆಯುತ್ತಾ ಹೇಳಿದ್ದರು–

"ಸುಮ್ಮನೆ ಹೆದರ್ತಿದ್ದೀಯಾ. ಹೆಂಗೇಲಿ ಏನು ತಾನೆ ಕಷ್ಟ ಆಗುತ್ತದೆ. ಒಂದು ಸಲ ಜೋರಾಗಿ ಚೀರಿದರೆ ಆಯಿತು. ಮಗ ಹುಟ್ಟಿ ಬಿಡುತ್ತಾನೆ. ಆದರೆ, ಒಂದು ವೇಳೆ ಮಗಳಿಗೆ ಜನ್ಮ ಕೊಡೋದೇ ಆದರೆ?"

ನಿಹಾಲ್‌ಕೌರ್ ವೀರೋಳ ತೌರು ಮನೆಯಲ್ಲಿ ಯಾವುದೇ ರೀತಿಯಲ್ಲಿ ಭಾರವಾಗಲಿಲ್ಲ. ಕೈಬಿಟ್ಟು ಖರ್ಚು ಮಾಡುತ್ತಿದ್ದಳು. ಮನೆಯಲ್ಲಿನ ಎಲ್ಲರೂ ಸರದಾರಿಣಿ ಸರದಾರಿಣಿ ಎಂದು ಕರೆದು ದಣಿಯರು. ನಿಹಾಲ್‌ಕೌರ್ ನಗುತ್ತ- "ಒಂದು ಸಲ ಚೀರಿದರೆ ಮಗ ಹುಟ್ಟುತ್ತಾನೆ. ಒಂದು ವೇಳೆ ಮಗಳನ್ನು ಹೆರುವುದಾದರೆ?"

ವೀರೋಳ ಅತ್ತಿಗೆ ಗಟ್ಟಿಯಾಗಿ ನಗುತ್ತ ಹೇಳಿದಳು. "ಎರಡು ಸಲ ಚೀರಿದರೆ ಮಗಳನ್ನು ಹೆತ್ತು ಬಿಡಬಹುದು"

"ಮಗಳಿಗೆ ಎರಡು ಸಲ ಚೀರಬೇಕೆ?" ನಿಹಾಲ್‌ಕೌರ್ ನಕ್ಕು ಕೇಳುತ್ತಿದ್ದಳು.

"ಒಂದು ಸಲ ಚೀರುವುದು ನೋವಿಗಾಗಿ. ಇನ್ನೊಂದು ಸಲ ಚೀರುವುದು ದುಃಖಕ್ಕಾಗಿ....." ಎಂದು ವೀರೋಳ ಅತ್ತಿಗೆ ಹೇಳಿದಳು. "ಖುಷಿ ಏನಿದ್ದರೂ ಗಂಡು ಮಕ್ಕಳದು. ಹೆಣ್ಣು ಮಕ್ಕಳದೇನು ಖುಷಿ ಇರುತ್ತೆ!"

ನಿಹಾಲ್‌ಕೌರಳ ಎದೆಯಲ್ಲೊಂದು ಆಳವಾದ ವೇದನೆ ಉಂಟಾಯಿತು. ನನ್ನ ಜೀವನದಲ್ಲಿ ನನಗೆ ಒಂದು ಸಲವಾಗಲಿ ಇಲ್ಲ ಎರಡುಸಲವಾಗಲಿ ಚೀರುವ ಅನುಭವವಾಗಲಿಲ್ಲ. ಆದರೆ ಅವಳು ತನ್ನ ಮುಗುಳ್ನಗುವ ತುಟಿಗಳಿಂದ ತನ್ನ ಈ ವೇದನೆಯನ್ನು ನುಂಗಿ ಬಿಟ್ಟಳು. ಎಷ್ಟರ ಮಟ್ಟಿಗೆ ಎಂದರೆ, ಅವಳ ನೋವೂ ಅವಳ ಮುಖವನ್ನು ನೋಡಿ ನಾಚಿಕೊಂಡಿತು.

ವೀರೋಳಿಗೆ ಪ್ರಸವ ವೇದನೆ ಶುರುವಾದ ರಾತ್ರಿ ಅವಳು ಆ ವೇದನೆಯನ್ನು ತನ್ನ ತುಟಿಕಚ್ಚಿ ಸಹಿಸಿಕೊಂಡು ಬಿಟ್ಟಳು. ಅದು ಯಾವರೀತಿ ಸಹಿಸಿದಳೆಂದರೆ ಯಾರಿಗೂ ಅದರ ಸುದ್ದಿ ಕೂಡ ಹತ್ತಲಿಲ್ಲ. ಕೇವಲ ಒಮ್ಮೆ ಮಾತ್ರ ಅವಳ ಚೀರಿಕೆ ಕೇಳಿದ್ದೇ ತಡ, ವೀರೋಳ ತಲೆ ಬದಿಯಲ್ಲಿ ಕುಳಿತಿದ್ದ ನಿಹಾಲ್‌ಕೌರ್ ಕಡೆ ನೋಡಿ ಸೂಲಗಿತ್ತಿ ಹೇಳಿದಳು- "ಶುಭವಾಗಲಿ ಸರದಾರಿಣಿ ಅವರೆ! ಬನ್ನಿ, ಗಂಡು ಮಗುವಿನಿಂದ ನಿಮ್ಮ ಮಡಿಲನ್ನು ತುಂಬುತ್ತೇನೆ!"

ನಿಹಾಲ್‌ಕೌರಳು ಮಗನನ್ನು ಮಡಿಲು ತುಂಬಿಸಿಕೊಂಡಳು, ಶುಭಕಾಮನೆಗಳನ್ನೂ ಸಹ ತುಂಬಿಸಿಕೊಂಡಳು. ಆದರೆ ಬೆಳಗಾಗುತ್ತಲೇ ಅವಳು ಸರದಾರನಿಗೆ ತಂತಿ ಕಳಿಸ ಹೊರಾಟಗ, ವೀರೋ ನಿಹಾಲ್‌ಕೌರಳನ್ನು ತನ್ನ ಬಳಿ ಕರೆದು ತನ್ನ ಎರಡೂ ಕೈಗಳನ್ನು ಅವಳ ಪಾದಗಳ ಮೇಲೆ ಊರಿ ಹೇಳಿದಳು- "ಸರದಾರಿಣಿ ನಾನು ಪ್ರಪಂಚಕ್ಕೆ ಬೇಕಾದರೆ ಸುಳ್ಳು ಹೇಳಬಲ್ಲೆ. ಆದರೆ ನಿಮಗೆ ನಾನು ಸುಳ್ಳು ಹೇಳಲಾರೆ

ಈ ಹುಡುಗ ನಿಮ್ಮ ಸರದಾರನದಲ್ಲ..... "ಪೀರೋ...." ಅವಳಿಗೆ ತನ್ನ ನಾಲಿಗೆ ಗಾಬರಿಯಿಂದ ನಿಂತು ಹೋದಂತಾಯಿತು.

"ನಾನು ಸರದಾರನಿಗೆ ಯಾವುದೇ ಥರದಲ್ಲೂ ಋಣಿಯಲ್ಲ. ಆದರೆ ನಿಮಗೆ ನಾನು ಋಣಿ ಈ ಹುಡುಗ ಕೇವಲ ಸರದಾರನ ಮನೆಯಂಗಳದಲ್ಲಿ ಆಡಿದರೆ ನಂದೇನೂ ಹಾಳಾಗಲ್ಲ. ಆದರೆ ಈ ಹುಡುಗನನ್ನು ನಿಮ್ಮ ಮಡಿಲಲ್ಲಿ ನಾನು ಹಾಕಲಾರೆ ಇವನು ನಿಮ್ಮ ಮಡಿಲಿಗೆ ಯೋಗ್ಯನಲ್ಲ."

"ಏನು ಹೇಳ್ತಾ ಇದ್ದೀ ವೀರೂ ನೀನು?"

"ನಾನೇನೋ ನಗುನಗುತ್ತಲೇ ಮಾಡಿದ್ದೆ. ಬಹುಶಃ ಕಾಲವು ನಗುವನ್ನು ಇದೇ ರೀತಿ ಕಚ್ಚಿಕೊಳ್ಳುತ್ತವೆ. ನಿಮ್ಮ ಹತ್ತಿರ ನಾನು ನಿಜವನ್ನೇ ಹೇಳ್ತಿದ್ದೀನಿ, ನಾನು ಮಾಡಿದ್ದಕ್ಕೆ ನನಗೆ ಯಾವುದೇ ಪಶ್ಚಾತ್ತಾಪ ಇಲ್ಲ. ನನ್ನ ಹೃದಯದಲ್ಲಿ ನಾನು ಪಶ್ಚಾತ್ತಾಪ ಪಡುತ್ತಿದ್ದರೆ ನಿಮ್ಮ ಸಲುವಾಗಿ ಅಷ್ಟೆ".

"ವೀ....... ರೋ!"

"ನಿಮಗೆ ನೆನಪಿರಬಹುದು ನಾನು ಕಳೆದ ವರ್ಷ ಒಂದು ಸಲ ನನ್ನ ತವರು ಮನೆಗೆ ಬಂದಿದ್ದೆ...... ನಿಮ್ಮ ಗುಮಾಸ್ತ ನನ್ನನ್ನು ತವರಿಗೆ ತಲುಪಿಸಿ ಮತ್ತೆ ವಾಪಸ್ ಕರೆದುಕೊಂಡು ಹೋಗಲು ನನ್ನ ಜೊತೆ ಬಂದಿದ್ದ. ನಮ್ಮ ತಂದೆ ತಾಯಿಗಳು ಹಣ ತೆಗೆದುಕೊಂಡು ನನ್ನನ್ನು ಒಬ್ಬ ಮುದಿ ಸರದಾರನಿಗೆ ಮದುವೆ ಮಾಡಿಕೊಟ್ಟು ಬಿಟ್ಟಿದ್ದಾರೆ ಎನ್ನುವ ಸುದ್ದಿ ಇಡೀ ಹಳ್ಳಿಲೆಲ್ಲಾ ಹರಡಿ ಬಿಟ್ಟಿತ್ತು. ಸರದಾರ್ ಎಂದೂ ಈ ಹಳ್ಳಿಗೆ ಬರಲಿಲ್ಲ. ನಮ್ಮ ಅಪ್ಪನೇ ನನ್ನನ್ನು ನೀವು ಇದ್ದ ಪಟ್ಟಣಕ್ಕೆ ಕರೆದುಕೊಂಡು ಬಂದಿದ್ದ ಮತ್ತು ಗುರುದ್ವಾರದಲ್ಲಿ ಮದುವೆ ಮುಗಿದ ನಂತರ ನನ್ನನ್ನು ನಿಮ್ಮ ಮನೆಯಲ್ಲಿ ಬಿಟ್ಟು ಬಂದಿದ್ದ..... ನಾನು ಊರಿಗೆ ಬಂದ ಮೇಲೆ, ಪ್ರತಿಯೊಬ್ಬರೂ ನನ್ನ ಸರದಾರ ಎಷ್ಟು ಮುದುಕ ಎಂದು ಕೇಳತೊಡಗಿದರು. ನನ್ನ ಬುದ್ಧಿಗೆ ಅದೇನು ಹೊಳೆಯಿತೋ ಏನೋ, ನಾನು ಅವರ ಕಾಟ ತಪ್ಪಿಸಿಕೊಳ್ಳಲು, ನನ್ನ ಮದುವೆ ಮುದಕನೊಂದಿಗೆ ನಡೆಯಲಿಲ್ಲ ಎಂದು ಹೇಳಿದೆ. ನಿಮ್ಮ ಗುಮಾಸ್ತ ಒಳ್ಳೆ ಯುವಕ, ಸುಂದರವಾಗೂ ಇದ್ದ. ಅವನನ್ನು ತೋರಿಸಿ ಇವನೇ ನನ್ನ ಯಜಮಾನ ಎಂದು ಅವರಿಗೆ ಹೇಳಿದೆ. ಇಡೀ ಊರಿಗೆ ಊರೇ ಆಶ್ಚರ್ಯ ಚಕಿತಗೊಂಡಿತು. ಗುಮಾಸ್ತನಿಗೆ ನಾನು ಈ ವಿಷಯ ಹೇಳಿದೆ. ಗುಮಾಸ್ತನೂ ಸುಳ್ಳನ್ನೇ ಅಪ್ಪಿಕೊಂಡನು. ನನ್ನ ಗೆಳತಿಯರು, ಕಿವಿಯ ಓಲೆಕೊಡಿಸಬೇಕು ಎಂದು ಅವನನ್ನು ಒತ್ತಾಯಿಸಿದಾಗ, ತನ್ನ ಅಕ್ಕಸಾಲಿಗ ಹತ್ತಿರ ಬೆಳ್ಳಿಯ ಓಲೆಗಳನ್ನು ಖರೀದಿಸಿ ಅವರಿಗೆ ಕೊಟ್ಟನು. ನಾನು ಐದಾರು ದಿನ ಇಲ್ಲಿದ್ದೆ. ದಿನವೂ ನಗುತ್ತಾ ನಗುತ್ತಾ ಇದ್ದು, ನನ್ನ ಮದುವೆ ಅವನ ಜೊತೇನೇ ಆಗಿತ್ತೆ ಹೊರತು, ಬೇರೆ ಇನ್ಯಾರ ಜೊತೆಯಲ್ಲೂ ಅಲ್ಲ ಎಂದು ಅನಿಸತೊಡಗಿತು"

# ಮುಚ್ಚಿದ ಡ್ರಾವರ್

*ಹಿಂದಿ ಮೂಲ: ಮನ್ನೂ ಭಂಡಾರಿ*
*ಕನ್ನಡಕ್ಕೆ : ವೀಣಾ ಕುಲಕರ್ಣಿ*

ಅವಳ ದೊಡ್ಡ ಟೇಬಲ್ ಮೂರು ಡ್ರಾವರ್‌ಗಳಾಗಿ ವಿಭಾಗಿಸಲ್ಪಟ್ಟಿತು. ಎಡಗಡೆ ಡ್ರಾವರ್ ವೈಯಕ್ತಿಕವಾದದ್ದು. ನಡುವಿನದು ಕೌಟುಂಬಿಕದು. ಬಲಗಡೆಯಲ್ಲಿ ಸಾಮಾನ್ಯ ವಿಷಯಗಳಿಗೆ ಸಂಬಂಧಪಟ್ಟ ಕಾಗದ ಪತ್ರಗಳಿದ್ದವು. ಅವರಿಬ್ಬರ ಸಂಬಂಧದ ಮಧ್ಯ ಸಣ್ಣ ಗೆರೆಯೆಳೆದ ಜಂಜರಿಯೇ ಈ ವಿಭಾಗಗಳನ್ನು ಮಾಡಿದ್ದಳು. ಆರಂಭದ ದಿನಗಳಲ್ಲಿ ಅವಳ ಲಕ್ಷ್ಯ ಟೇಬಲ್, ಡ್ರಾವರ್‌ಗಳತ್ತ ಹೋಗಿರಲಿಲ್ಲ. ಆಗೆಲ್ಲ ಅವಳ ಆಕರ್ಷಣೆಯೆಲ್ಲ ಮನೆಯಲ್ಲಿನ ಪಲ್ಲಂಗದತ್ತ ಮಾತ್ರವಿರುತ್ತಿತ್ತು. ದಿನದ ಇಪ್ಪತ್ನಾಲ್ಕು ಗಂಟೆಗಳು, ರಾತ್ರಿಯ ಆ ಎಂಟು ಗಂಟೆಗಳಲ್ಲಿಯೇ ಕರಗಿ ಹೋಗಲಿಯೆಂದು ಅವಳ ಮನ ಬಯಸುತ್ತಿತ್ತು. ಆಗೆಲ್ಲ ವಿಪಿನ್‌ನ ದೇಹವೇ ಅವಳ ವ್ಯಕ್ತಿತ್ವದ ಪರ್ಯಾಯವಾಗಿತ್ತು. ಶರೀರವೊಂದವನ್ನು ಬಿಟ್ಟು ಬೇರೆ ವ್ಯಕ್ತಿತ್ವ, ಸಂಬಂಧ ಅಥವಾ ಜೀವನವಿದೆಯೆಂದು ಅವಳಿಗನ್ನಿಸಿಯೇ ಇರಲಿಲ್ಲ.

ಆದರೆ ಇವೆಲ್ಲವೂ ಆರಂಭದ ದಿನಗಳಲ್ಲಿದ್ದು, ಮನದ ವೈರುಧ್ಯತೆಗಳು ಅಳಿಸಿಹೋಗಿದ್ದವು. ಆಗ ಎಲ್ಲವು ವಸಂತಕಾಲವೆನಿಸುತ್ತಿತ್ತು. ಕೆಲಸದಲ್ಲಿ ಚೈತನ್ಯವಿದ್ದು ಅದೂ

ತನ್ನ ನಾಲಿಗೆಗೆ ಕೀಲಿ ಹಾಕಿದ್ದಾರೆನ್ನಿಸುತ್ತಿತ್ತು. ರಾತ್ರಿಯಿಡೀ ತಳಮಳಿಸಿದರೂ ಏನೂ ಮಾತನಾಡದ ಅಯೋಮಯ ಸ್ಥಿತಿಯಲ್ಲಿದ್ದಳು. ಮೊದಲೇ ಹೆಣ್ಣಿನ ನೋಟ ತೀಕ್ಷ್ಣವಾಗಿರುತ್ತದೆ ಅವರಲ್ಲಿ ಸಂಶಯವೆನುವುದು ಹೊಕ್ಕರೆ ಅದು ಆಕಾಶ, ಪಾತಾಳವನ್ನು ಸೀಳುವುದರಲ್ಲಿ ಸಮಯವೇನೂ ಬೇಕಾಗಿಲ್ಲ. ಮರುದಿನ ವಿಪಿನ್‌ನ ವೈಯಕ್ತಿಕ ಡ್ರಾವರ್ ತೆರೆದಿತ್ತು. ಅವರಲ್ಲಿ ಕೆಲವು ಡೈರಿಗಳು, ಮಹಿಳೆಯೊಂದಿಗಿನ ಮಗುವಿನ ಫೋಟೊ, ಪತ್ರಗಳು, ಮಾತ್ರೆಗಳಿದ್ದವು. ಅವಳ ಮನದಲ್ಲಿ ಸಿಟ್ಟು, ತಿರಸ್ಕಾರ, ದುಃಖಮಿಶ್ರಿತ ಭಾವಗಳು ಬಿರುಗಾಳಿಯೆಬ್ಬಿಸುತ್ತಿದ್ದವು. ತಲೆ ಹಿಡಿದುಕೊಂಡು ಗಂಟೆಗಟ್ಟಲೆ ಕೂತುಬಿಟ್ಟಳು. ಬಿಕ್ಕಿ ಅಳತೊಡಗಿದ ಅವಳಿಗೆ ತಾನು ನಿಂತ ನೆಲ ಕುಸಿದಂತೆನ್ನಿಸಿ ಅಭದ್ರತೆ ಕಾಡತೊಡಗಿತು. ಮನೆಯ ಮೇಲ್ಛಾವಣಿ, ಗೋಡೆಗಳು ಅಲುಗಾಡಿದಂತೆನ್ನಿಸಿದವು.

ಯಾಕೆಂದರೆ ಆ ಡ್ರಾವರ್‌ನಲ್ಲಿ ಬರೀ ವಿಪಿನ್‌ನ ಭೂತಕಾಲವಷ್ಟೇ ಅಲ್ಲದೇ ವರ್ತಮಾನದೊಂದಿಗೆ ಭವಿಷ್ಯದ ಯೋಜನೆಗಳಿದ್ದವು. ಅವಳು ವಿಪಿನ್‌ನ ವೈಯಕ್ತಿಕ ಬದುಕಿನ ಹತ್ತಿರ ಹೋದಂತೆ, ಅವಳಿಗರಿಯದಂತೆ ವಿಪಿನ್‌ನಿಂದ ದೂರವಾಗತೊಡಗಿದಳು. ಆ ದೂರ ಮೆಲ್ಲಗೆ ದೇಹದೆಲ್ಲೆಡೆ ವ್ಯಾಪಿಸತೊಡಗಿತು. ಅವರಿಬ್ಬರೂ ಪರಸ್ಪರ ಅಪರಿಚಿತರಾಗತೊಡಗಿದರು. ನಂತರದಲ್ಲಿ ಅವರಿಬ್ಬರ ಲೆಕ್ಕಗಳು, ಸಂಬಂಧಗಳು ಬೇರೆಯಾಗತೊಡಗಿದವು. ಇಬ್ಬರಲ್ಲಿಯೂ ಅವರವರ ತರ್ಕಗಳಿದ್ದವು. ಅವು ತಮ್ಮನ್ನು ಎಲ್ಲಿಗೆ ಕರೆದೊಯ್ಯುವದೆಂಬ ಯೋಚನೆಯೂ ಅವರಿಗಿತ್ತು. ಆದರೂ ಮೂರು ದಿನಗಳಿಗೊಮ್ಮೆ ಅವರಿಬ್ಬರಲ್ಲಿ ವಾದವಿವಾದಗಳಾಗಿ ಅದು ಮಂಜರಿಯ ಕಣ್ಣೀರಿನಿಂದ ಕೊನೆಗೊಳ್ಳುತ್ತಿತ್ತು. ಈಗ ಸಂದೇಹ ಸ್ನೇಹದ ಸ್ಥಾನ ಆಕ್ರಮಿಸಿ ತರ್ಕವು ಸದ್ಭಾವನೆಯ ಎಳೆಗಳನ್ನು ಕಿತ್ತಿ ಹಾಕಿತ್ತು. ಆಗೆಲ್ಲ ಒಂಟಿಯೆನಿಸುತ್ತಿದ್ದ ಮಂಜರಿಗೆ ಮನೆಯೊಂದು ಮರುಭೂಮಿಯಂತಾಗುತ್ತಿತ್ತು. ಪ್ರತಿ ಕೆಲಸವೂ ಭಾರವೆನ್ನಿಸುತ್ತ, ಖಾಲಿ ಸಮಯವು ಮತ್ತಷ್ಟು ಒಜ್ಜೆ ಹೇರುತ್ತಿತ್ತು. ಗಂಟೆಗಟ್ಟಲೇ ಪುಸ್ತಕ ಓದಬೇಕೆಂದರೂ ಅದರಲ್ಲಿನ ಸಾಲುಗಳು ಕಣ್‌ಕೆಳಗೆ ದಾಟಿ ಹೋಗುತ್ತಿದ್ದವು. ಮನಸ್ಸು ಕಳವಳಕ್ಕೊಳಗಾಗುತ್ತಿತ್ತು. ವಿದ್ಯಾರ್ಥಿಗಳ ಪೇಪರ್ ಚೆಕ್ ಮಾಡುವಾಗ "ಅದೇನು ಪೇಪರ್ ಚೆಕ್ ಮಾಡುತ್ತಿದ್ದೀಯೋ ಅಥವಾ ಪ್ರೂಫ್ ತಿದ್ದುತ್ತಿದ್ದೀಯೋ" ಅಂತ ಅವಳ ಗೆಳತಿ ಚೇಷ್ಟೆ ಮಾಡುತ್ತಿದ್ದಳು. ವಿಪಿನ್‌ನೊಂದಿಗಿನ ಸಂಬಂಧದಲ್ಲಿ ವ್ಯತ್ಯಾಸ ಬಂದಾಗಿನಿಂದ ಅವಳ ಮನಸ್ಸು ಹತೋಟಿ ತಪ್ಪುತ್ತಿತ್ತು.

ಮನೆಯ ಬಾಗಿಲು ಕಿಟಕಿ ತೆರೆದಿಟ್ಟರೂ ಶುದ್ಧ ಗಾಳಿಯ ಕೊರತೆಯಿಂದ ವಾತಾವರಣವೆಲ್ಲ ವಿಷಮಯವೆನಿಸುತಿತ್ತು. ಯಾರೋ ಅವಳನ್ನೇ ನೋಡುತ್ತಾ ಸಾಯುತ್ತಿರುವಂತೆನಿಸುತ್ತಿತ್ತು. ಅವಳದು ಅವರನ್ನು ಬದುಕಿಸಲಾಗದ ನಿರ್ದಯತೆಯಿಂದ ಕೊಲ್ಲಲಾಗದಂತ ಸ್ಥಿತಿಯಾಗಿತ್ತು. ಒಳಗೊಳಗೆ ಹಲವಾರು ಸಂಕಲ್ಪಗಳನ್ನು

ಮಾಡುತ್ತಿದ್ದಳು. ಆದರೆ ಅವೆಲ್ಲವೂ ಬರೀ ವಿಚಾರಗಳಾಗಿಯೇ ಉಳಿದವೇ ಹೊರತು ಮುಂದುವರೆಯಲಾಗಲಿಲ್ಲ. ಯಾಕೆಂದರೆ ಮನೆಯಲ್ಲಿ ಹೊಸ ಜೀವನದ ಆಗಮನವಾಗುವುದಿತ್ತು. ಅವಳು ತನ್ನ ಮತ್ತು ಅವರ ದೌರ್ಭಾಗ್ಯವನ್ನು ಒಟ್ಟೊಟ್ಟಿಗೆ ಹಳಿದುಕೊಳ್ಳುತ್ತಿದ್ದಳು. ಆದರೂ ಅವೆಲ್ಲದರ ಮಧ್ಯ ಮನದಲ್ಲೊಂದು ಸಣ್ಣ ಆಶಾಕಿರಣ ಇಣುಕುತ್ತಿತ್ತು. ಬಹುಶಃ ಅದೇ ಬರುವ ಹೊಸ ಜೀವವೇ ತಮ್ಮಿಬ್ಬರ ಮಧ್ಯ ಸೇತುವೆಯಾಗಬಹುದೆಂದುಕೊಂಡಳು. ಆದರೂ ಈ ಕಾಲದಲ್ಲಿ ಅಂಥ ಆಸೆಗಳನ್ನಿಟ್ಟುಕೊಳ್ಳುವುದೇ ಮೂರ್ಖತನವೆಂದು ಒಳಗೊಳಗೇ ಅಂದುಕೊಳ್ಳುತ್ತಿದ್ದಳು. ಯಾಕೆಂದರೆ, ಬದುಕಿನ ಪ್ರತಿ ತಿರುವುಗಳಲ್ಲಿನ ಪರಿಸ್ಥಿತಿ ಮತ್ತು ಸಂಬಂಧಗಳು ಸಮಾಧಾನವಿಲ್ಲದ ಸಮಸ್ಯೆಗಳಾಗಿಯೇ ಬರುತ್ತವೆ. ಅದನ್ನು ಪರಿಹರಿಸುವುದು ಅಸಾಧ್ಯ ಬರೀ ಅನುಭವಿಸಬೇಕಷ್ಟೇ. ಆದರಲ್ಲಿಯೇ ಮನಸ್ಸು ಒಡೆದು ಹರಿದು ಹೋಗುತ್ತಿತ್ತು. ಅವಳು ಎರಡು ವರ್ಷಗಳಲ್ಲಿ ನಿರ್ವಿಣ್ಣಳಾಗಿದ್ದಳು. ಆದರೆ ವಿಪಿನ್ ತನ್ನಲ್ಲಿ ತಪ್ಪುಗಳನ್ನು ಅವಳು ಸ್ವೀಕಾರ ಮಾಡಿಕೊಂಡಿದ್ದಾಳೆ. ತನ್ನ ಸಂಬಂಧವನ್ನು ಕತ್ತರಿಸಿಕೊಳ್ಳುವುದಿಲ್ಲವೆಂದು ಅಂದುಕೊಳ್ಳುತ್ತಿದ್ದನು. ಆದರೆ ಹಾಗಾಗಲಿಲ್ಲ. ಅಂದು ಅವರ ಮದುವೆಯ ಐದನೇ ಆ್ಯನಿವರ್ಸರಿ. ಆ ದಿನವು ಎಲ್ಲ ಅರ್ಥಗಳನ್ನು ಕಳೆದುಕೊಂಡಿದ್ದರೂ ಆಚರಿಸುವುದು ಅನಿವಾರ್ಯವಾಗಿತ್ತು. ಬೇಡವೆಂದರೂ ಅದೇಕೊ ದುರ್ಬಲಳಾಗುತ್ತಿದ್ದಳು, ಮನದ ಯಾತನೆ ನೂರು ಪಟ್ಟು ಹೆಚ್ಚಾಗುತ್ತಿತ್ತು. ಅಂಥ ಮಧುರ ಅನುಭೂತಿಯೇನೂ ಉಂಟಾಗುತ್ತಿರಲಿಲ್ಲ. ಆದರೂ ತನ್ನನ್ನು ಸಂಜೆ ಎಂಟು ಗಂಟೆಗೆ ಲಾ-ಯೋಹಿಂ ಹೋಟೆಲ್‌ನಲ್ಲಿ ಭೇಟಿಯಾಗಬೇಕೆಂದು ವಿಪಿನ್‌ಗೆ ಆಗ್ರಹ ಪೂರ್ವಕವಾಗಿ ಕೇಳಿದಳು.

ಲಾ-ಯೋಹಿಂ ಹೋಟೆಲ್‌ನ ಮೂಲೆಯ ಟೇಬಲ್‌ಗೆ ಕುಳಿತ ಆತನ ಸುತ್ತಲಿನ ಟೇಬಲ್‌ಗಳು ಖಾಲಿಯಾಗಿದ್ದವು. ತನ್ನ ಟೇಬಲ್ ಮೇಲೆ ಇಳಿಬಿದ್ದ ದೀಪವನ್ನು ಆರಿಸಿದ. ಕತ್ತಲಾಗುತ್ತಿದ್ದಂತೆ ತಾನು ಬಯಸಿದ ಇದೇ ಕತ್ತಲೆಯು ತನ್ನ ಬಾಳನ್ನು ಬೆಳಗುವದೆಂದು ಒಂದು ಕ್ಷಣ ಅವನಿಗೆನ್ನಿಸಿತು. ಒಂದು ಕ್ಷಣ ಮನ ಅಸ್ತವ್ಯಸ್ತವಾದರೂ ಮತ್ತೊಂದು ಕ್ಷಣದಲ್ಲಿ ಸಹಜವಾದ ಅವಳು ತನ್ನದು ಅತಿಯಾದ ಭಾವುಕ ಮನಸ್ಸೆನ್ನಿಸಿತು. ಮನುಷ್ಯ ಬಹಳ ಭಾವುಕನಾದರೆ ಕಷ್ಟ ಅನುಭವಿಸಬೇಕಾಗುತ್ತದೆ, ಬದುಕು ಅಸಾಧ್ಯವಾಗುತ್ತದೆ. ಮಂಜರಿ ತನಗಾಗಿ, ತನ್ನ ಮಗುವಿಗಾಗಿ ಬದುಕಬೇಕೆಂದುಕೊಂಡಿದ್ದಳು. ಅಲ್ಲಿಂದ ಅವರಿಬ್ಬರೂ ಮೂರು ತಾಸುಗಳ ನಂತರ ಹೊರಬಂದಾಗ, ತಾನೆಷ್ಟು ಸಹಜವಾಗಿ ನಿರ್ಲಿಪ್ತಳಾಗಿ ಮಾತನಾಡಿದೆನೆಂದು ಮಂಜರಿಗೆ ಅಚ್ಚರಿಯೆನಿಸಿತು. ಆದರೆ ಆ ಎಲ್ಲ ಎಲ್ಲ ನಿರ್ಣಯಗಳನ್ನು ತಮಗಾಗಿ ಅಲ್ಲ ಬೇರೆಯವರಿಗಾಗಿ ನಿರ್ಧರಿಸಿದ್ದಳು. ಹೆಂಗಸರು ಅಷ್ಟು ನಿರ್ಲಿಪ್ತವೆಂಬುದು ಅವಳಿಗೆ ಗೊತ್ತಿತ್ತು. ಅದೂ ಇಂಥ ಸೂಕ್ಷ್ಮ ಸಮಯದಲ್ಲಿ ಹೆಂಗಸರು

ಮಾತನಾಡುವುದು ಅಸಾಧ್ಯ, ಬಹಳವೆಂದರೆ ಭೋರೆಂದು ಅತ್ತು ಬಿಡಬಲ್ಲರು.

ತನ್ನ ನಿರ್ಣಯಕ್ಕೆ ವ್ಯಾವಹಾರಿಕ ರೂಪ ಕೊಡಲು ತನ್ನೆಲ್ಲ ಸಾಮಗ್ರಿಗಳನ್ನು ಕಟ್ಟಿಕೊಂಡು ಎರಡು ತಿಂಗಳ ರಜೆ ಹಾಕಿ ದೆಹಲಿಗೇ ವಿದಾಯ ಹೇಳಿದ್ದು ಅವಳಿಗಿನ್ನೂ ಆಶ್ಚರ್ಯವೆನಿಸುತಿತ್ತು. ವಿಪಿನ್‌ಗೆ ಮಗನ ಬಗ್ಗೆ ಪ್ರೀತಿ ಇದ್ದಿದ್ದರಿಂದ ತಣ್ಣಗಿನ ದನಿಯಲ್ಲಿ ಹೇಳಿದ– "ಇಷ್ಟೆಲ್ಲ ಆದ ಮೇಲೆ ನನಗಿಲ್ಲಿ ಇರುವುದು ಇಷ್ಟವಿಲ್ಲ. ನಾನೇ ದಿಲ್ಲಿ ಬಿಟ್ಟು ಹೋಗುತ್ತೇನೆ. ಬಹುಶಃ ನೀನು ಇಲ್ಲೇ ಇರಲು ಬಯಸುತ್ತಿಯಾದ್ದರಿಂದ ಈ ಮನೆ ನಿನ್ನ ಹೆಸರಿಗೇ ಇರಲಿ" ಅಲ್ಲಿಯವರೆಗೆ ಮಂಜರಿಗೆ ಮುಂದೇನು ಎಂಬುದರ ಬಗ್ಗೆ ಸ್ಪಷ್ಟ ನಿರ್ಧಾರವಿರಲಿಲ್ಲ. ಆ ಸಮಸ್ಯೆಯನ್ನು ಸುಲಭವಾಗಿ ಬಗೆ ಹರಿಸಿದರೆ ಹೊಸ ಜೀವನಕ್ಕೆ ದಾರಿ ಸಿಗಬಹುದೆಂಬ ವಿಶ್ವಾಸವಿತ್ತು. ಅಂಥ ಮಾನಸಿಕ ಹೊಯ್ದಾಟದಲ್ಲಿಯೂ ಅವಳ ವ್ಯವಹಾರಿಕ ಬುದ್ಧಿ ಕುಂಠಿತವಾಗಿರಲಿಲ್ಲ. ಅಂದು ವಿಪಿನ್‌ನ್ನು ಮದುವೆಯಾಗಿ ಬಂದ ಮಂಜರಿ ಸತ್ತು ಹೋದಳೆಂದು ಅನ್ನಿಸುತ್ತಿತ್ತು. ಇದು ಅವಳ ಶವದಿಂದ ಹುಟ್ಟಿದ ಮಂಜರಿಯ ಹೊಸ ರೂಪವಾಗಿತ್ತು ಅದು ದೊಡ್ಡ ನಾಟಕವಾಗುವ ಪ್ರಸಂಗವಾಗಿತ್ತು. ಮಗುವಿನ ಬಗ್ಗೆ ಏನಾದರೂ ಆಗಬಹುದೆಂದುಕೊಂಡವಳಿಗೆ ಹಾಗಾಗಲಿಲ್ಲ. ಅದೆಲ್ಲವನ್ನು ಬಿಟ್ಟು ಕೆಲವು ಔಪಚಾರಿಕ ಮಾತುಗಳಾಗುವಾಗ ಅವಳ ಮನಸ್ಸು ಮರಗಟ್ಟುತ್ತಿತ್ತು, ಪ್ಲಾಟ್ ಫಾರ್ಮ್ ಹಾಗೂ ನಿಂತ ಜನರನ್ನು ಒಂದಕ್ಕೆ ಹಾಕಿ ರೈಲು ಓಡತೊಡಗಿತು. ಅದಲ್ಲೆವನ್ನು ಮಂಜರಿ ನಿರ್ಭಾವುಕಳಾಗಿ ನೋಡತೊಡಗಿದಳು. ಅದೆಲ್ಲ ದೃಶ್ಯಗಳು ಹಿಂದೆ ಸರಿದು ಹೋದಾಗ ಬಿಡುಗಡೆಯ ನಿಟ್ಟುಸಿರು ಹೊರಬಿತ್ತು. ಶರೀರದ ಹುಣ್ಣೊಂದು ಒಣಗಿದಾಗ ಚರ್ಮವನ್ನು ಕಿತ್ತು ತೆಗೆಯುವಂಥ ಭಾವನೆ ಅವಳನ್ನಾವರಿಸುತ್ತಿತ್ತು. ಎರಡು ತಿಂಗಳ ನಂತರ ಅವಳು ಅದೇ ಮನೆ ಪ್ರವೇಶಿಸಿದಳು. ತನ್ನ ದೇಹ ಜಡ್ಡು ಬಿದ್ದು ಎದ್ದವಳಂತೆ ಕಾಣುತ್ತಿತ್ತು. ಅಶಕ್ತತೆಯಿಂದ ಮುಖ ಕಪ್ಪಾಗಿತ್ತು. ಅದೆಲ್ಲವೂ ಅನಿಸುತ್ತಿದ್ದರೂ ಅದರಿಂದೇನೂ ವ್ಯತ್ಯಾಸವೆನಿಸಲಿಲ್ಲ. ಅದೇಕೋ ಕಣ್ಣಿನ ದೃಷ್ಟಿ ಮಂಜಾಗುತ್ತಿದೆ ಎನ್ನಿಸಿದಾಗ ಅಲ್ಲಿಗೆ ಬಂದ ನಂತರ ಚಶ್ಮಾ ಕೊಂಡುಕೊಂಡಳು.

ಮನೆ ಹಾಗೇ ಇದ್ದರೂ ವಿಪಿನ್‌ನನ್ನು ನೆನಪಿಸುವ ಯಾವ ವಸ್ತುಗಳೂ ಅಲ್ಲಿ ಕಾಣಲಿಲ್ಲ. ಆ ಟೇಬಲ್ ಇದ್ದರೂ ಅದನ್ನಿಡುವ ಮೂಲೆ ಖಾಲಿಯಾಗಿತ್ತು. ಅವಳ ಮನದಲ್ಲಿ ಭಯ ಮಿಶ್ರಿತ ಭಾವನೆಯಿತ್ತು. ವಿಪಿನ್‌ನಿಂದ ಮುಕ್ತಳಾದರೂ ಆ ಟೇಬಲ್‌ನಿಂದ ಮುಕ್ತಳಾಗಿರಲಿಲ್ಲ. ಮನೆಯ ಸಾಮಾನುಗಳ ಮೇಲೆ ಧೂಳು ಮುಸುಕಿತ್ತು. ಮೊದಲ ದಿನ ಏನೂ ಕೆಲಸ ಮಾಡಲಾಗದ ಅವಳು, ಎರಡನೇಯ ದಿನ ಮನೆಯ ಕಸ ಗುಡಿಸತೊಡಗಿದಳು. ತುಂಡು ಸಿಗರೇಟಿನಿಂದ ತುಂಬಿದ ಒಂದೆರಡು ಆ್ಯಶ್ ಟ್ರೇಗಳನ್ನು ಬಿಟ್ಟರೆ ಅವನನ್ನು ನೆನಪಿಸುವ ಯಾವ ವಸ್ತುಗಳೂ ಅಲ್ಲಿ ಇರಲಿಲ್ಲ. ಆ್ಯಶ್ ಟ್ರೇ ಖಾಲಿ ಮಾಡುವಾಗ ಅವಳ ಕೈ ಕಂಪಿಸಿತು. ಮನೆಯೆಲ್ಲ ಸ್ವಚ್ಛವಾದರೂ ಅದ್ಯಾವುದೋ ಪರಿಚಿತ

ವಾಸನೆ ಅಲ್ಲಿ ಹರಡಿದೆ ಎನ್ನಿಸುತ್ತಿತ್ತು. ಅವಳೆಲ್ಲಿಗೇ ಹೋದರೂ ಆ ವಾಸನೆಯಿಂದ ಮುಕ್ತಳಾಗಲು ಸಾಧ್ಯವಿರಲಿಲ್ಲ.

ಆಗ ಅವಳು ಮನೆಯ ಬಾಗಿಲು, ಕಿಟಕಿ ತೆರೆದಾಗ ಶುದ್ಧ ಗಾಳಿ, ಬಿಸಿಲು ಬರತೊಡಗಿತು. ಅರೆತೆರೆದ ಬಾಗಿಲಿನಿಂದ ಗಾಳಿ, ಬಿಸಿಲುಗಳೊಂದಿಗೆ ಹೊಸ ವಾಸನೇ, ಹಲವು ಮುಖಗಳು, ಕಣ್ಣುಗಳೂ ಕೂಡ ಮೆಲ್ಲನೇ ಇಣುಕತೊಡಗಿದವು. ಅದರಲ್ಲಿ ಕೆಲವು ಸಂತಾಪ ಸೂಚಿಸಿದರೆ, ಇನ್ನೂ ಕೆಲವು ಆತ್ಮೀಯತೆ ತೋರಿಸುವವಾಗಿದ್ದವು. ಕೆಲವೊಂದು ಅವಳ ಸಾಹಸವನ್ನು ಪ್ರಶಂಸಿಸುತ್ತಿದ್ದರೆ ಕೆಲ ದನಿಗಳು ವಿಪಿನ್‌ನನ್ನು, ಮಹಿಳೆ ಮತ್ತು ಮಗುವಿನೊಂದಿಗೆ ನೋಡಿದ ಸುದ್ದಿಯನ್ನು ಮತ್ತೆಗೇ ಬಿತ್ತರಿಸುತ್ತಿದ್ದವು. ಆಗೆಲ್ಲ ವಿಪಿನ್ ಬಗ್ಗೆ ಟೀಕೆಗಳಿರುತ್ತಿದ್ದವು. ಆದರೆ ಅವಳಿಗೆ ತನ್ನ ಬಗ್ಗೆ ಮೆಚ್ಚುಗೆಯಾಗಲೀ, ವಿಪಿನ್ ಬಗ್ಗೆ ತಿರಸ್ಕಾರವಾಗಲೀ ಮನಸ್ಸಿಗೆ ಹತ್ತುತ್ತಿರಲಿಲ್ಲ. ಮೊದಲ ವರ್ಷ ಪರಿಚಿತ ಹೊಸ ಮುಖಗಳ ಸಂಖ್ಯೆ ಹೆಚ್ಚಾಗಿದರೂ ನಂತರ ಅವು ಕಡಿಮೆಯಾಗತೊಡಗಿದವು. ಸಹಾನುಭೂತಿ ಸೂಚಿಸಬೇಕೆಂದರೆ ವಿಷಯ ಹಳೆಯದಾಗಿತ್ತು. ತಾವು ತಮ್ಮ ಕರ್ತವ್ಯ ನಿಭಾಯಿಸಿದ್ದೇವೆಂದು ಅವರಿಗೂ ಅನಿಸಿತ್ತು. ಅದರಲ್ಲಿನ ಒಂದು ಮುಖ ಮಾತ್ರ ಜೊತೆಗಿದ್ದು ಮನೆಯ ಒಳಗನ್ನೂ ಪ್ರವೇಶಿಸಿತ್ತು. ಆದರೆ ಮಂಜರಿಗೆ ಯಾವುದೇ ಅವಸರವಿರಲಿಲ್ಲ. ಹಾಂ ಆದರೆ ಅವಳಿಗೆ ಇತ್ತೀಚಿಗೆ ಒಂಟಿತನ ಬಹಳ ಕಾಡುತ್ತಿತ್ತು. ನೌಕರಿ ಭಾರವೆನಿಸಿ ಬದುಕು ನೀರಸವೆನಿಸತೊಡಗಿತ್ತು.

ಒಂಟಿಯಾಗಿದ್ದಾಗ ಕೆಲವೊಮ್ಮೆ ಇನ್ನು ಮುಂದೆ ತನ್ನ ಜೀವನದ ದಾರಿಗಳು ಬದಲಾಗುವುದಿಲ್ಲವೆಂದು ಯೋಚಿಸುತ್ತಿದ್ದಳು. ತಾನು ಯಾವ ರೀತಿ ನಿರ್ಲಿಪ್ತಳಾಗಿ ಎಲ್ಲವನ್ನೂ ಸಹಿಸಿಕೊಂಡಿದ್ದಳು. ಇದೆಲ್ಲನೂ ತಾನು ಮೆಚ್ಯೂರ್ಡ್ ಆಗಿರುವದರಿಂದ ಸಾಧ್ಯವಾಯಿತೆಂದುಕೊಂಡಳು. ಬಹುಶಃ ಆ ವಯಸ್ಸಿನಲ್ಲಿ ಅದು ಸಂಭವವಿದ್ದರೂ ಆ ಮುಖ ಸನಿಹ ಬಂದಾಗ ತಾನಿನ್ನೂ ಹತ್ತು ವರ್ಷಗಳಷ್ಟು ಚಿಕ್ಕವಳಾದಂತೆನ್ನಿಸಿ ಇನ್ನೂ ಏನು ಕೆಟ್ಟಿಲ್ಲವೆಂದುಕೊಳ್ಳುತ್ತಿದ್ದಳು. ದಿನಗಳೆದಂತೆ ವಯಸ್ಸು ಹೆಚ್ಚಾಗಿದ್ದರೂ ಅವಳ ಭಾವನೆಗಳಲ್ಲಿ ಅದೇ ಪಾವಿತ್ರ್ಯತೆ ಇದೆ. ಜೀವನದ ಆ ಅಮೂಲ್ಯ ದಿನಗಳಲ್ಲಿ ಭಾವನೆಗಳನ್ನು ಹರಿಯ ಬಿಡಬಹುದಾಗಿದ್ದರೂ ಸತ್ತ ಸಂಬಂಧದ ಶವ ಹೊರುವವರಲ್ಲೇ ಕಳೆದು ಹೋಗಿದ್ದವು.

ಆದರೂ ಮೂರು ವರ್ಷಗಳಾಗುವವರೆಗೆ ಏನನ್ನೂ ನಿರ್ಣಯಿಸದಾಗಿದ್ದಳು. ತನ್ನ ಮಗನ ಕಾರಣದಿಂದ ಏಕಾಂಗಿತನದೊಂದಿಗೆ ಹೋರಾಡಲು ಯತ್ನಿಸುತ್ತಿದ್ದಳು. ಅದೇಕೋ ಮಗ ಅಜಿತನ ಬಗ್ಗೆ ಅವಳ ಪ್ರೀತಿ ಅಸಮತೋಲನವಾಗುತ್ತಿದೆ ಎನ್ನಿಸುತ್ತಿತ್ತು. ಕೆಲವರು ಪಿಸುದನಿಯಲ್ಲಿ ಅವನನ್ನು ಹಾಸ್ಟೆಲ್‌ನಲ್ಲಿಡುವಂತೆ ಸಲಹೆ ನೀಡುತ್ತಿದ್ದರು. ಮೊದಮೊದಲು ಅವಳು ತನ್ನ ಒಂಟಿತನ ಹೆಚ್ಚಾಗುತ್ತದೆಯೆಂದು ಅವನನ್ನು ಹಾಸ್ಟೆಲ್‌ಗೆ

ಕಳಿಸಲು ನಿರಾಕರಿಸುತ್ತಿದ್ದಳು. ಆದರೆ ನಂತರದಲ್ಲಿ ತನ್ನ ಏಕಾಂಗಿತನವನ್ನು ನಿವಾರಿಸಿಕೊಳ್ಳಲು ಮಗನ ಭವಿಷ್ಯ ಬಲಿ ಕೊಡುತ್ತಿದ್ದೇನೆಯೆಂದು ಅವಳಿಗನ್ನಿಸಿತು. ಆಗ ಅವಳು ತನ್ನ ಸಮಸ್ಯೆಗೆ ಸಹಜವಾದ ಮಾರ್ಗದಿಂದ ಪರಿಹಾರ ಪಡೆಯಬೇಕೆಂದು ಅಜಿತನನ್ನು ಹಾಸ್ಟೆಲ್‌ಗೆ ಕಳಿಸಿವರಾಯಿತೆಂದು ಒಮ್ಮೆಲೆ ನಿರ್ಧರಿಸಿದಳು. ಪರಿಸ್ಥಿತಿ ಬಿಗಡಾಯಿಸುವ ಮೊದಲೆ ತಟಸ್ಥ ಧೋರಣೆಯಿಂದ ಸರಿಯಾಗಿ ಯೋಚಿಸಿ, ಸರಿಯಾದ ನಿರ್ಧಾರ ಮಾಡಿದ್ದರ ಬಗ್ಗೆ ಅವಳಿಗೆ ಸ್ವಲ್ಪ ಖುಷಿ ಮತ್ತು ಗರ್ವ ಮೂಡಿತು.

ದಿಲೀಪನ ಸಾಂಗತ್ಯದಲ್ಲಿ ಬದುಕಿನ ಹತ್ತು ವರ್ಷಗಳು ಒಮ್ಮೆಲೇ ಕಳೆದು ಹೋಗಿದ್ದವು. ಬದಲಿಸಿದ ಮನೆ ಆಧುನಿಕವಾಗಿ ಅಲಂಕೃತವಾಗಿತ್ತು ಹೊಸ ಮನೆಯಲ್ಲಿ ಉತ್ಸಾಹದಿಂದ ಆಕೆ ಸದಾ ಹಾಡೊಂದನ್ನು ಗುನಗುನಿಸುತ್ತ ಕೆಲಸದಲ್ಲಿರುತ್ತಿದ್ದಳು. ಸಹೋದ್ಯೋಗಿಗಳ ಕುಹಕ ನೋಟ ತಾಳದೆ ನೌಕರಿ ಬಿಟ್ಟಿದ್ದಳು. ಅಲ್ಲದೆ ನೌಕರಿಯಿಂದ ಬೇಸತ್ತಿದ್ದಳು. ಡಿಸೆಂಬರ್ ಚಳಿಯ ರಾತ್ರಿಗಳನ್ನು ದಿಲೀಪನ ಬಿಸಿಯಪ್ಪುಗೆಯಲ್ಲಿ ಕಳೆವ ಅವಳು ಬೆಳಿಗ್ಗೆ ಆಲಸ್ಯದಿಂದ ಕಣ್ತೆರೆದಾಗ ಎದುರಿಗಿನ ಡ್ರೆಸಿಂಗ್ ಟೇಬಲ್‌ನಲ್ಲಿ ಅಲಂಕಾರದ ಸಾಮಗ್ರಿಗಳು ಕಾಣುತ್ತಿದ್ದವೇ ಹೊರತು ವಿದ್ಯಾರ್ಥಿಗಳ ಉತ್ತರ ಪತ್ರಿಕೆಗಳಲ್ಲ. ಆಗೆಲ್ಲ ಅವಳ ಮನಸ್ಸು ಸಂತಸದಿಂದ ಹಗುರಾಗುತ್ತಿತ್ತು. ರಜಾ ದಿನಗಳನ್ನು ಕಳೆಯಲು ಅಜಿತ್ ಹಾಸ್ಟೆಲ್‌ನಿಂದ ಮನೆಗೆ ಬಂದಿದ್ದ. ದಿಲೀಪ್ ಸದಾ ಮನೆಯಲ್ಲಿ ಇರುವುದನ್ನು ಗಮನಿಸುತ್ತಿದ್ದ, ಅದಕ್ಕಾಗಿ ಅವರಿಬ್ಬರು ಪರಸ್ಪರ ತಿರಸ್ಕರಿಸುವ ಸಂದರ್ಭಗಳ ಸಂದಿಗ್ಧತೆಯಿಂದ ಪಾರಾಗಿದ್ದಳು. ಮಗ ಮನೆಗೆ ಬಂದಾಗ ಖುಷಿಯಾದ ಮಂಜರಿ ಅವನಿಗೆ ಏನನ್ನು ತಿನ್ನಿಸಲಿ, ಎಲ್ಲಿ ತಿರುಗಾಡಿಸಲಿ ಎಂಬ ಉತ್ಸುಕತೆಯಲ್ಲಿದ್ದಳು. ದಿಲೀಪ್ ಹೊರಗೆ ಹೋಗುತ್ತಿದ್ದಂತೆಯೇ ಮಗನನ್ನು ಕರೆದುಕೊಂಡು ಹೊರಬೀಳುತ್ತಿದ್ದಳು. ಡಿಸೆಂಬರ್‌ನ ಸುಂದರ ಬಿಸಿಲು ದಿಲ್ಲಿಯ ರಸ್ತೆ, ಮೈದಾನಗಳಲ್ಲಿ ಹರಿದಿರುತ್ತಿತ್ತು. ಪ್ಯಾಕೆಟ್‌ಗಳಿರುತ್ತಿದ್ದವು.

ರಜೆ ಮುಗಿದು ಅಜಿತ್ ಹಾಸ್ಟಲಿಗೆ ಮರಳಿ ಹೊರಟಾಗ ಅವನೊಂದಿಗೆ ಗೆಳೆಯರ ಗುಂಪಿತ್ತು. ಅವರೊಂದಿಗೆ ಸ್ಕೂಲ್‌ನ ಆರು ತಿಂಗಳ ಬಿಲ್ ಬಂದಿತ್ತು. ಅದನ್ನು ನೋಡಿದ ದಿಲೀಪ್ ಸಹಜವಾಗಿಯೇ– "ಈ ಸ್ಕೂಲ್ ಬಹಳ ಮಹಾಗಿಯಾಗಿದೆ, ಅದರಲ್ಲಿ ಈ ತಿಂಗಳಿನ ಖರ್ಚು ಹೆಚ್ಚಾಗಿಯೇ ಇದೆ" ಅಂದಾಗ ಮಂಜರಿಯ ಮುಖದಲ್ಲಿ ಸಣ್ಣ ಬೇಸರದ ಛಾಯೆ ಸುಳಿದಿತ್ತು. ಮಾತು ಸಹಜವಾಗಿದ್ದರೂ ಸತ್ಯವಾಗಿತ್ತು. ಅಜಿತ್ ದಿಲೀಪ್‌ನ ಸ್ವಂತ ಮಗನೇ ಆಗಿದ್ದರೆ ಇಂಥ ಮಾತು ಆಡುತ್ತಿದ್ದನೇ? ಆದರೆ ಆತ ಅವನ ಮಗನಾಗಿರಲಿಲ್ಲ. ಅದರಲ್ಲೂ ಸಂದರ್ಭವೇ ಬೇರೆ ಆಗಿದ್ದರಿಂದ ಮಾತೇ ಅಪಾರ್ಥವಾದಂತೆನ್ನಿಸಿತು ಆಗ ಸನ್ನಿವೇಶದ ಗಂಭೀರತೆ ಅರಿತ ದಿಲೀಪ್ ತಟ್ಟನೆ ಮಾತನ್ನು ಸರಳಗೊಳಿಸಿದ– 'ಏನು ಕಾಲ ಬಂದಿದೆ ಅಲ್ವಾ, ನಾವು ಇಷ್ಟೆಲ್ಲ ಕಲಿತರೂ

ಇಷ್ಟೊಂದು ಖರ್ಚು ಆಗಿರಲಿಲ್ಲ' ದಿಲೀಪನ ಮಾತು ಸಹಜವೆನಿಸಲಿಲ್ಲ. ಆಗ ಮಾತ್ರ ಮಂಜರಿಗೆ ತಾನು ನೌಕರಿ ಬಿಟ್ಟ ಬಗ್ಗೆ ಮೊದಲ ಬಾರಿಗೆ ವಿಷಾದವೆನ್ನಿಸಿತು.

ಇಷ್ಟೆಲ್ಲ ಆದ ಮೇಲೆ ಆ ಮನೆಯಲ್ಲಿ ಒಂದು ಹೊಸ ಟೇಬಲ್ ಕಾಣಿಸಿಕೊಂಡಿತು. ಆದರೆ ಅದು ದಿಲೀಪನ ರೂಮಿನಲ್ಲಿರದೆ ಮಂಜರಿಯ ರೂಮಿನಲ್ಲಿತ್ತು. ಅದಕ್ಕೆ ಎರಡು ಡ್ರಾವರ್‌ಗಳಿದ್ದವು- ಒಂದು ವೈಯಕ್ತಿಕವಾದದ್ದು, ಇನ್ನೊಂದು ಕೌಟುಂಬಿಕವಾದದ್ದು. ವೈಯಕ್ತಿಕ ಡ್ರಾವರನಲ್ಲಿ ಅಜಿತನ ಬೇಡಿಕೆ ವಸ್ತುಗಳ ಪಟ್ಟಿಯ ಪ್ರತಿ, ಅವನ ಫೋಟೋ, ಸ್ಕೂಲಿನ ರಿಪೋರ್ಟ್ ಮತ್ತು ಅಜಿತನ ಅರ್ಧ ಖರ್ಚನ್ನು ತಾನು ಭರಿಸುವ ಆಶ್ವಾಸನೆ ನೀಡಿದ ವಿಪಿನ್‌ನ ಔಪಚಾರಿಕ ಪತ್ರಗಳಿದ್ದವು. ಆ ಟೇಬಲ್‌ನ ವಿಭಜನೆಯೂ ಮತ್ತೆ ಮೊದಲಿನಂತೆ ಮನಸ್ಸು ಶರೀರದಲ್ಲಾಗುವ ಇಡೀ ಮನೆಯನ್ನು ವ್ಯಾಪಿಸತೊಡಗಿತು. ಹೊರಗೆ ತೋರಿಕೆಗಾಗಿ ಮಾತು ವ್ಯವಹಾರಗಳಲ್ಲಿ ಸಹಜತೆ ಇತ್ತು. ಆದರೆ ಅವರಿಗರಿವಾಗದಂತೆ ಬಯಸದೆ ಶರೀರ, ಮನಸ್ಸುಗಳು ಒಡೆದು ಹೋಗಿದ್ದವು. ಈ ಸಲದ ಪ್ರಸಂಗ ಪರಿಸ್ಥಿತಿ ವಿಭಿನ್ನವಾಗಿದ್ದರಿಂದ ಅಷ್ಟೊಂದು ನೋವೆನಿಸಲಿಲ್ಲ.

ಮಂಜರಿ ಮಲಗಿದಲ್ಲಿಯೇ ರಾತ್ರಿ, ಹಗಲು ಅದೇನನ್ನೋ ಯೋಚಿಸುತ್ತಿದ್ದಳು. ಆಗೆಲ್ಲ ವಿಪಿನ್‌ನ ನೆನಪು ಸಿಟ್ಟು ತರಿಸುತ್ತಿರಲಿಲ್ಲ. ವಿಪಿನ್ ಬರೀ ಅವಳ ಸಂಬಂಧವನ್ನು ಹರಿದೊಗೆದಿರಲಿಲ್ಲ. ಆದರೆ ಎಷ್ಟೊಂದು ಕೌಶಲ್ಯದಿಂದ ಅವಳ ಬದುಕನ್ನು ಕತ್ತರಿಸಿ, ತುಂಡಾಗಿಸಿ ಮುಂದೆ ಕೂಡಾ ಅದೇ ಶಪಿತ ಚೂರುಗಳ ನೆರಳಿನಲ್ಲಿ ಜೀವನ ಕಳೆಯುವಂತೆ ಮಾಡಿದ್ದ, ಕೊನೆಗೂ ಕೂಡಾ ಅವಳು ತನ್ನ ಸಂಪೂರ್ಣ ಬದುಕನ್ನು ಬದುಕಲಾಗಲೇ ಇಲ್ಲ ಎಂಬ ಅನಿಸಿಕೆಯಿಂದ ಅವಳಿಗೆ ತಾನು ಬಿಡುಗಡೆಯಾಗುವುದು ಅಸಾಧ್ಯವೆನಿಸಿತು.

(ಹಿಂದೀ ಸಾಹಿತ್ಯದಲ್ಲಿ ೫೦-೬೦ರ ದಶಕದ ನವ್ಯ ಕಾಲಘಟ್ಟದಲ್ಲಿ ಸಾಹಿತ್ಯ ಕೃಷಿ ಆರಂಭಿಸಿದ ಮನ್ನೂ ಭಂಡಾರಿ ಹಿಂದಿಯ ಪ್ರಮುಖ ಕಥೆಗಾರ್ತಿ. ಬದಲಾಗುತ್ತಿರುವ ಸಂದರ್ಭಗಳಲ್ಲಿ ಮನುಷ್ಯ ಸಂಬಂಧಗಳೊಳಗಿನ ಸೂಕ್ಷ್ಮತೆಗಳನ್ನು ಯಥಾರ್ಥವಾಗಿ ಚಿತ್ರಿಸಿ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿದ ಸಶಕ್ತ ಲೇಖಕಿ. ಅವರ ಹಲವಾರು ಕಥೆಗಳು ಸಾಹಿತ್ಯಾಸಕ್ತರನ್ನು ಸೆಳೆದಿವೆ. ಬಾಲ ಮನೋವಿಜ್ಞಾನದ ಕಥಾವಸ್ತುವನ್ನೊಳಗೊಂಡ ಕಾದಂಬರಿ ಆಪ್ ಕಾ ಬಂಟೀ ಚಲನಚಿತ್ರವಾಗಿಯೂ ಮನ್ನೂ ಭಂಡಾರಿ ಅವರಿಗೆ ಹೆಸರು ತಂದುಕೊಟ್ಟಿದೆ.)





# 'ತಾಯಿ' ಕಾದಂಬರಿ ಎಂದಿಗೂ ಪ್ರಸ್ತುತ

*– ಡಾ. ಎಲ್.ಸಿ. ಸುಮಿತ್ರಾ*

ತಾಯಿ ಕಾದಂಬರಿ ಶತಮಾನ ಕಳೆದರೂ ಅದು ನಮ್ಮ ಇಂದಿನ ಸಾಮಾಜಿಕ ಸ್ಥಿತಿಯಲ್ಲಿ ಪ್ರಸ್ತುತವಾಗಿದೆ ಎನ್ನುವುದು ಕಾದಂಬರಿಯ ಮಹತ್ವವನ್ನು ಹೇಳುವುದರ ಜತೆಗೆ ನಮ್ಮ ಸಮಾಜದಲ್ಲಿರುವ ವಿವಿಧ ಸ್ತರಗಳ ಸಾಮಾಜಿಕ ಅಸಮಾನತೆಯನ್ನು ಸೂಚಿಸುತ್ತದೆ.

೧೮೬೮ರಲ್ಲಿ ಹುಟ್ಟಿ ೧೯೩೬ರವರೆಗೆ ಬದುಕಿನ ವ್ಯಾಕ್ಸಿಂಗಾರ್ಕಿ ಸಾಮಾಜವಾದಿ ವಾಸ್ತವವಾದದ ಪ್ರತಿಪಾದಕ. ೧೯೦೫ರಲ್ಲಿ ನಡೆದ, ಆದರೆ ವಿಫಲವಾದ ರಷಿಯನ್ ಕ್ರಾಂತಿಯಲ್ಲಿ ಗಾರ್ಕಿ ಭಾಗವಹಿಸಿದ. ಗಾರ್ಕಿ ಈ ಅನುಭವಗಳನ್ನು ಬಳಸಿಕೊಂಡು ೧೯೦೬ರಲ್ಲಿ ಬರೆದ ತಾಯಿ (ಮದರ್) ಕಾದಂಬರಿ ಕಾವ್ಯಾತ್ಮಕವಾದ ನಿರೂಪಣೆ ಹೊಂದಿದೆ. ನ್ಯಾಯಕ್ಕಾಗಿ ನಿರಂತರ ಹಂಬಲಿಸುವ ಕಥಾವಸ್ತುವಿದೆ. ಗಾರ್ಕಿ ಈ ಕೃತಿ ರಚನೆ ಮಾಡುವ ಕಾಲಕ್ಕೆ ಲಿಯೋ ಟಾಲ್‌ಸ್ಟಾಯ್ ಮತ್ತು ದಾಸ್ತೊಯೆಸ್ಕಿ ತಮ್ಮ ಪ್ರಮುಖ ಕೃತಿಗಳನ್ನು ರಚಿಸಿದ್ದರು. ಶೋಷಿತರ, ಸಮಾಜದ ಕೆಳವರ್ಗದವರ ದನಿ ಅವರ ಕಾದಂಬರಿಗಳಲ್ಲಿ ವ್ಯಕ್ತವಾಗಿತ್ತು. ಆದರೆ ಗಾರ್ಕಿಯ 'ಮದರ್' ಕಾದಂಬರಿಯಲ್ಲಿ ಕಾರ್ಮಿಕರ ಬದುಕೇ ಕೇಂದ್ರ. ಅವರ ದುಃಖ, ದುಗುಡಗಳನ್ನೇ ಪ್ರಧಾನವಾಗಿ ತೀವ್ರವಾಗಿ ಅಭಿವ್ಯಕ್ತಿಸುವ ಕಾದಂಬರಿ 'ತಾಯಿ.'

ಮ್ಯಾಕ್ಸಿಮ್‌ಗಾರ್ಕಿ ತನ್ನ ಕಾಲದ ರಷಿಯನ್ ಸಮಾಜದ ಬಂಡವಾಳಶಾಹಿ ವ್ಯವಸ್ಥೆಯನ್ನೂ ಅದರೆಲ್ಲ ಕುರೂಪವನ್ನು ಚಿತ್ರಿಸಿದ್ದಾರೆ. ಕಾರ್ಮಿಕರು ಮತ್ತು

ಸಮಾಜದ ಕೆಳಹಂತದ ಜನ ಈ ವ್ಯವಸ್ಥೆಯನ್ನು ವಿರೋಧಿಸಲು ಸಂಘಟಿತರಾದ ಬಗೆ, ಪ್ರತಿ ಕುಟುಂಬದಿಂದ ತ್ಯಾಗಮಯೀ ಯುವ ಜನರ ಒಂದು ದೊಡ್ಡ ಪಡೆಯೇ ಸಿದ್ಧವಾದ ರೀತಿ, ನತಾಷ, ಸಾಷ ಎಂಬ ಶ್ರೀಮಂತ ಹೆಣ್ಣುಮಕ್ಕಳು ಈ ಹೋರಾಟದಲ್ಲಿ ಪಾಲ್ಗೊಂಡು ಇವರೆಲ್ಲರೂ 'ತಾಯಿ'ಯ ಸಹಕಾರದೊಂದಿಗೆ ಮುಂದುವರೆದ ರೀತಿ ಒಂದು ಮನ ಮಿಡಿಯುವ ಕಥನವಾಗಿದೆ. ತಾವು ನಂಬಿದ ಸಿದ್ಧಾಂತಕ್ಕಾಗಿ ತೀವ್ರವಾಗಿ ಹೋರಾಡುವ ಸ್ವಂತ ಸುಖವನ್ನು ಲೆಕ್ಕಿಸದ ನಿಲೋವ್ನಳಂತಹ 'ತಾಯಿ' ವ್ಲಾಸೋವಾನಂತಹ ಮಗ ಕಥೆಯ ಕೊಂಡಿಯಾಗಿದ್ದಾರೆ. ಪ್ರಸ್ತುತ ನಮ್ಮ ಭಾರತದ ಸಂದರ್ಭದಲ್ಲಿ ನವ ಬಂಡವಾಳಶಾಹಿ ವ್ಯವಸ್ಥೆ ಮತ್ತು ಬೂರ್ಷ್ವಾ ಚಿಂತನೆಗಳು ಬಟ್ಟಗೇ ಇವೆ. ಚಳುವಳಿಗಳು ದಿಕ್ಕು ತಪ್ಪುತ್ತಿವೆ. ಚಳುವಳಿಗಳು ದಿಕ್ಕು ತಪ್ಪಲು ಮಾಧ್ಯಮಗಳೂ ತಮ್ಮ ಕಾಣಿಕೆ ಒಪ್ಪಿಸುತ್ತಿವೆ. ಇಂತಹ ಸಂದರ್ಭದಲ್ಲಿ 'ತಾಯಿ'ಯಂತಹ ಸಾಹಿತ್ಯ ಕೃತಿ ನೀಡಬಲ್ಲ 'ಪ್ರೇರಣೆ'ಯನ್ನು ಗುರುತಿಸಿಕೊಳ್ಳಬೇಕಿದೆ.

ಕಾದಬರಿಯ ಆರಂಭದಲ್ಲಿಯೇ ಕಾರ್ಮಿಕರ ಯಾಂತ್ರಿಕ ದಿನಚರಿಯನ್ನು ಕಾದಂಬರಿ ದಾಖಲಿಸುವುದು ಹೀಗೆ "ಅವರ ಹಗಲೆಲ್ಲವನ್ನೂ ಕಾರಖಾನೆ ಕಬಳಿಸಿತ್ತು. ಅದರ ಯಂತ್ರಗಳು ಕಾರ್ಮಿಕರ ಶಕ್ತಿಯನ್ನು ತಮಗೆ ಅಗತ್ಯವಿದ್ದಷ್ಟು ಹೀರಿದ್ದುವು. ಒಂದು ಕುರುಹನ್ನೂ ಹಿಂದೆ ಬಿಡದೆ ಕಳೆದುಹೋಯಿತು ಆ ದಿನ. ಮಾನವ ತನ್ನ ಗೋರಿಯತ್ತ ಮತ್ತೊಂದು ಹೆಜ್ಜೆಯನ್ನು ಮುಂದಿರಿಸಿದ್ದ. ........ ಹಲವು ವರ್ಷಗಳಿಂದ ಬೆಳೆದು ಬಂದ ಬಳಲಿಕೆಯಿಂದ ಅವರ ಹಸಿವು ಮಾಯವಾಗಿತ್ತು ಹಸಿವನ್ನು ತೀಕ್ಷ್ಣಗೊಳಿಸಲೆಂದು ಅವರು ಕುಡಿಯುತ್ತಿದ್ದರು. ಕುಡಿದು ವೋಡ್ಕದ ಹರಿತವಾದ ಕಟುತದಿಂದ ಹೊಟ್ಟೆಯುರಿಯುವಂತೆ ಮಾಡಿಕೊಳ್ಳುತ್ತಿದ್ದರು" (ಪುಟ-೨೨) ಕುಡಿದು ಜಗಳ ಹೊಡೆದಾಟ, ಹೆಂಡತಿ ಮಕ್ಕಳನ್ನು ಕ್ರೂರವಾಗಿ ನಡೆಸಿಕೊಳ್ಳುವುದು ಸಾಮಾನ್ಯವಾಗಿತ್ತು.

ಪಾವೆಲ್ ವ್ಲಾಸೋವಾ ತನ್ನ ತಾಯಿಗೆ ತಾನು ಮಾಡುತ್ತಿರುವ ಕ್ರಾಂತಿಯ ಕೆಲಸದ ಮಹತ್ವ ವಿವರಿಸಲು "…. ನಾವು ಕೂಲಿಕಾರರು ಕಲಿಯಬೇಕು ನಮ್ಮ ಬಾಳ್ವೆ ಯಾಕೆ ಇಷ್ಟೊಂದು ಕಷ್ಟಮಯವಾಗಿದೆ ಎಂಬುದನ್ನು ನಾವರಿತುಕೊಳ್ಳಬೇಕು" (ಪು-೩೭) ಎಂದು ಹೇಳುವಲ್ಲಿ ಶ್ರಮಿಕರಲ್ಲಿ ಮೂಡಿದ ಎಚ್ಚರವನ್ನು ಗಾರ್ಕಿ ಸೂಚಿಸುತ್ತಾರೆ. ಶ್ರಮಜೀವಿಗಳು ತಮ್ಮ ಹೃದಯಗಳನ್ನು ತೋಡಿಕೊಳ್ಳುತ್ತಿದ್ದರೇ ಹೊರತು, ತಮ್ಮ ಬಾಳಿನ ಸಂಕಷ್ಟಗಳ, ಗೋಳಿನ ಕಾರಣವನ್ನು ಪರಿಶೀಲಿಸುವ ಗೋಜಿಗೆ ಹೋಗಿರಲಿಲ್ಲ. ಎಚ್ಚೆತ್ತ ಪಾವೆಲ್ ರೀಬಿನಾಗೆ ಹೇಳ್ತಾನೆ "ಬಾಳ್ವೆ ನಮ್ಮೆಲ್ಲರ ವಿಷಯದಲ್ಲೂ ಕಠಿಣವಾಗಿದೆ. ನಮಗೆಲ್ಲರಿಗೂ ಅನ್ಯಾಯ ಮಾಡಿದೆ ಆದರೆ ಆ ಬಾಳ್ವೆಯೇ ನಮ್ಮ ಕಣ್ಣು ತೆರೆದು ತನ್ನ ಕಹಿಯಾದ ಅರ್ಥಾನ ತೋರಿಸ್ತಿದೆ. ತನ್ನ ಸಮಸ್ಯೆಗಳ ಪರಿಹಾರಾನ ಹೇಗೆ ಬೇಗ ಬೇಗನೆ ಸಾಧಿಸಬೇಕು ಅನ್ನೋದನ್ನ ತೋರಿಸಿಕೊಡ್ತಿದೆ. (ಪುಟ-೮೫)

ರೇಬಿನ್, ಪಾವೆಲ್ ಮತ್ತು ಸ್ನೇಹಿತರು ಓದಿನ ಮೂಲಕ, ಚರ್ಚೆಯ ಮೂಲಕ ದಾರಿಯನ್ನು ಕಂಡುಕೊಳ್ಳುವ ಪ್ರಯತ್ನ ಮಾಡ್ತಾರೆ. ತಾಯಿ ತನ್ನ ಮಗನ ಸ್ನೇಹಿತರು ಮನೆಯಲ್ಲಿ ಕುಳಿತು ಚರ್ಚಿಸಲು ಸಹಾಯ ಮಾಡ್ತಾಳೆ. ಮಗ ಮತ್ತು ಅವನ ಸ್ನೇಹಿತರು ಸೆರೆಮನೆ ಸೇರಿದಾಗ ಕಾರ್ಖಾನೆಗೆ ಊಟಕೊಡುವ ನೆಪದಲ್ಲಿ ಹೋಗಿ ಕರಪತ್ರ ಹಂಚುತ್ತಾಳೆ.

ಈ ವಿವರಗಳೆಲ್ಲವು ದಮನಿತ ಜೀವಗಳು ಬಿಡುಗಡೆಯಾಗಿ ಚಡಪಡಿಸುವ ತೀವ್ರತೆಯನ್ನು ಮನವರಿಕೆ ಮಾಡುತ್ತದೆ.

ರಷಿಯಲ್ಲಿ ೧೮೫೭ರಲ್ಲಿ ಹೀಗೆ ಜಮೀನುದಾರರ, ಶ್ರೀಮಂತರ ಅಧೀನದಲ್ಲಿ ಗುಲಾಮರಂತೆ ಬದುಕುತ್ತಿದ್ದ ಜನರ ಸಂಖ್ಯೆ ೨೩.೧ ಮಿಲಿಯನ್ ಎಂದರೆ ಜನಸಂಖ್ಯೆ ವಿರಳವಾಗಿದ್ದ ಆ ಕಾಲದಲ್ಲಿಯೇ ಇಷ್ಟೊಂದು ಜನರನ್ನು ಪ್ರಾಣಿಗಳಂತೆ ದುಡಿಸಿಕೊಳ್ಳಲಾಗುತ್ತಿತ್ತು ಎಂಬುದೇ ರಷಿಯಾದ ಶೋಷಿತರಿಗೆ ಕ್ರಾಂತಿ ಎಷ್ಟು ಅನಿವಾರ್ಯವಾಗಿತ್ತು ಎಂದು ತಿಳಿಯುತ್ತದೆ. ಆಗ ರಷಿಯಾದ ಜನಸಂಖ್ಯೆ ೬೨.೫ ಮಿಲಿಯನ್ ಇತ್ತು.

ಇಂಗ್ಲೆಂಡ್‌ನಲ್ಲಿ ೧೮೩೪ರಲ್ಲಿ ಗುಲಾಮ ಪದ್ಧತಿಯನ್ನು ರದ್ದುಪಡಿಸಿದಾಗ ೭೭೬೦೦೦ ಜನ ಗುಲಾಮರಿದ್ದರು ಎಂದು ಇತಿಹಾಸದ ಅಂಕಿಅಂಶಗಳು ಹೇಳುತ್ತದೆ. ಇವೆಲ್ಲವು ಸುದೂರ ಗತಕಾಲದ್ ಇತಿಹಾಸ ಆಯಿತು. ಆದರೆ ೨೧ನೇ ಶತಮಾನದಲ್ಲಿಯೂ ನಮ್ಮ ದೇಶದಲ್ಲಿ ಹೆಚ್ಚುತ್ತಲೇ ಹೋಗುತ್ತಿರುವ ಆರ್ಥಿಕ ಅಸಮಾನತೆ ಬೆಳೆಯುತ್ತಲೇ ಹೋಗುತ್ತಿರುವ ಬೆಳೆಯುತ್ತಿರುವ ನಗರದ ಕೊಳೆಗೇರಿಗಳಿಗೆ ಕಾರಣವೇನು ಎಂಬ ಪ್ರಶ್ನೆ ಕಾಡುತ್ತದೆ. ಆದರೆ ಈ ಅಂತರ ನೀಗಬೇಕಾದರೆ ದಮನಿತರಲ್ಲೇ 'ಚಲನೆ'ಯುಂಟಾಗಬೇಕು. ಈ ಬಗೆಯ ಬದಲಾವಣೆಗೆ ಬೇಕಾದ ಅರಿವನ್ನು ಮೂಡಿಸುವ ಜವಾಬ್ದಾರಿಯನ್ನು ಹೊತ್ತುಕೊಳ್ಳುವ ಸಂಘಟನೆಗಳೂ ಬೇಕು.

ತಾಯಿ ಮತ್ತು ನತಾಷ ಈ ಕ್ರಾಂತಿ ಹುಟ್ಟುವ ಸಂದರ್ಭವನ್ನು ಕುರಿತು ಆಡುವ ಮಾತುಗಳನ್ನು ಗಮನಿಸೋಣ ತಾಯಿಯ ಮಾತು ಚಿಂತನಾರ್ಹವಾಗಿದೆ. "ಸ್ವಲ್ಪ ಒಳ್ಳೇದೇನಾದ್ರೂ ಮುಂದೆ ಸಿಗ್ತದೆ ಅನ್ನೋ ಆಸೆಯಿಂದ ಜನರು ಬದುಕುತ್ತಾರೆ. ಆದರೆ ಮುಂದೆ ಆಸೆ ಇಡಬೇಕಾದ್ದೇ ಏನೂ ಇಲ್ಲಾಂತಾದ್ರೆ, ನಾವು ಬಾಳೋದು ಎಂತಹ ಬದುಕು ಹೇಳು?" (ಪುಟ–೨೮೫)

ಈ ಬಗೆಯ ಹತಾಶ ಸ್ಥಿತಿಯಲ್ಲಿ ಸ್ವತಃ ತಾನೇ ಇದ್ದು, ಅದೇ ಬಗೆಯ ನೋವನ್ನನುಭವಿಸುವ ಜನರನ್ನು ನೋಡುತ್ತ ಅವರು ಈ ಸ್ಥಿತಿಯನ್ನು ಪ್ರತಿಭಟಿಸುವುದನ್ನು ಅವಳು ಬಯಸುತ್ತಿದ್ದಳು. "ತುಂಬ ಅತೃಪ್ತನಾದ ಮನುಷ್ಯನನ್ನು

ಕಾಣಲು, ತಾಯಿ ಯಾವಾಗಲೂ ಸಂತೋಷಪಡುತ್ತಿದ್ದಳು. ಆ ಅತೃಪ್ತಿ, ಇದೆಲ್ಲವೂ ವಿಧಿಯ ಆಟವೆಂಬುದನ್ನು ಪ್ರತಿಭಟಿಸುತ್ತ ನಿರ್ದಿಷ್ಟ ಪ್ರಶ್ನೆಗಳಿಗೆ ಒಂದೇ ಸಮನೆ ಉತ್ತರವನ್ನು ಅಪೇಕ್ಷಿಸುತ್ತಿತ್ತು. ..... ಭೂಮಿಯ ಮೇಲೆ ಯಾವುದಕ್ಕೂ ಕೊರತೆ ಇರಲಿಲ್ಲ ..... ಶಹರದ ಚರ್ಚುಗಳಲ್ಲಿ ದೇವರಿಗೆ ಯಾವ ಉಪಯೋಗಕ್ಕೂ ಬಾರದ ಚಿನ್ನ, ಬೆಳ್ಳಿ ಹೇರಳವಾಗಿದ್ದವು. ಆದರೆ ದೇವಾಲಯದ ಬಾಗಿಲಲ್ಲಿ ಭಿಕ್ಷುಕರು ನಡುಗುತ್ತ, ಪುಡಿಗಾಸಿಗಾಗಿ ಸಹನೆಯಿಂದ ಕೈಯೊಡ್ಡಿ ಕಾಯುತ್ತ ಇರುತ್ತಿದ್ದರು". ಇದು ನೂರು ವರ್ಷದ ಹಿಂದಿನ ರಷಿಯದ ಚಿತ್ರ. ಆದರೆ ಭಾರತದಲ್ಲಿ ಇದು ಇಂದಿಗೂ ಕಾಣಸಿಗುವ ದೃಶ್ಯ. ತಾಯಿ ಕಾದಂಬರಿಯ ರೀಬಿನ್‌ನ ಶತಮಾನದ ಹಿಂದಿನ ಮಾತು ಇಂದು ಇಲ್ಲಿ ಮಾರ್ಗದರ್ಶಕವಾಗಿದೆ. "ಅವರ ಕೈಗೆ ಪುಸ್ತಕ ಕೊಡಿ ತಮಗೆ ಬೇಕಾದ ಉತ್ತರಾನಾ ಅವರೇ ಕಂಡು ಹಿಡೀತಾರೆ" (ಪುಟ-೮೯) ಹೀಗೆ ತಾಯಿಯಂಥ ಸಶಕ್ತವಾದ ಕೃತಿ ಮಾತ್ರ ತನ್ನ ಕಾಲದೇಶಗಳನ್ನು ಮೀರಿ ನಿಲ್ಲುವಂತಹದ ಸಾಮರ್ಥ್ಯವನ್ನು ಪಡೆದಿರುತ್ತದೆ. ಗಾರ್ಕಿ 'ತಾಯಿ' ಎಂಬ ರೂಪಕವನ್ನು ಬಹಳ ಪರಿಣಾಮಕಾರಿಯಾಗಿ ಬಳಸಿದ್ದಾರೆ. ತಾಯಿಯ ಪೊರೆಯುವ ಶಕ್ತಿಯನ್ನು ಅವಳ ಸೃಜನಶೀಲತೆಯನ್ನು ಕಾದಂಬರಿ ತುಂಬಾ ಚೆನ್ನಾಗಿ ಅನಾವರಣಗೊಳಿಸಿದೆ. ಗಂಡ ವ್ಲಾಸೋವಾ ಬದುಕಿರುವವರೆಗೂ 'ತಾಯಿ' ದೈಹಿಕ ಮಾನಸಿಕ ಹಿಂಸೆಯನ್ನನುಭವಿಸುತ್ತ ದುರ್ಬಲಳಾಗಿರುತ್ತಾಳೆ ವಿಧವೆಯಾದ ನಂತರ ಮಗ ಪಾವೆಲ್ ದುಡಿದು ಮನೆ ನಡೆಸಲು ತೊಡಗಿದ ಮೇಲೆ 'ತಾಯಿ'ಯ ವ್ಯಕ್ತಿತ್ವದ ಬೇರೆ ಸಾಧ್ಯತೆಗಳು ಅಭಿವ್ಯಕ್ತಿ ಪಡೆದುಕೊಳ್ಳುತ್ತವೆ. ಎಳೆಯ ತಲೆಮಾರಿನ ಚಳವಳಿ ನಿರತ ತರುಣ, ತರುಣಿಯರನ್ನು ಪೊರೆಯುವ (ಪ್ರೋತ್ಸಾಹಿಸುವ ಜೊತೆಗೆ ಒಡನಾಡುವ ಶಕ್ತಿಯಾಗಿ ತಾಯಿ ಕಾಣಿಸುತ್ತಾಳೆ. ಮನುಷ್ಯನ ಅಸ್ತಿತ್ವವಾಗಿ ನಡೆಯುವ ಅಂತಿಮವಾದ ಹೋರಾಟದ ಕ್ಷಣಗಳಲ್ಲಿಯೂ ಅವನನ್ನು ಕೈ ಹಿಡಿದು ನಡೆಸುವ ಶಕ್ತಿ 'ತಾಯಿ' ಆದರೆ 'ತಾಯಿಯ ವಿಷಯದಲ್ಲಿ ಸಾಮಾನ್ಯವಾಗಿ ಯಾರೂ ಕನಿಕರ ತೋರುವುದಿಲ್ಲ" (ಪುಟ, ೩೭–ತಾಯಿ)

ಸಾಮಾನ್ಯ ಜನರ ಬದುಕು ಯಾಕಿಷ್ಟು ದುಸ್ಥಿತಿಯಲ್ಲಿದೆ ಎಂದು ನಾವು ಕಂಡುಕೊಳ್ಳಬೇಕು ಎಂದು ನತಾಷ, ಹೊಹೋಲ್ ಮುಂತಾದವರು ಮಾತನಾಡಿಕೊಳ್ಳುವಾಗ ತಾಯಿ ದನಿಗೂಡಿಸುತ್ತಾಳೆ. "ಬಾಳಿನ ಮೂಲವನ್ನು ನೀವು ಪರಿಶೀಲಿಸಿ" (ಪುಟ, ೪೮–ತಾಯಿ)

'ತಾಯಿ' ಕಾದಂಬರಿಯ ವಾಸ್ತವಿಕ ದೃಷ್ಟಿಕೋನದಿಂದಾಗಿ 'ತಾಯಿ' ಪಾತ್ರ ವೈಭವೀಕರಣಗೊಳ್ಳುವ ಅಪಾಯದಿಂದ ಪಾರಾಗಿದೆ. ಹಾಗೆಯೇ ಕಾರ್ಮಿಕರ ಕೌಟುಂಬಿಕ ಬದುಕಿನ ಮಹತ್ವವನ್ನು, ಅಗತ್ಯವನ್ನು ನಿರಾಕರಿಸುವುದಿಲ್ಲ. "ಕುಟುಂಬವಿದ್ದರೆ. ಮನುಷ್ಯನ ಶರೀರ ಮನಸ್ಸು ಎರಡೂ ಹೆಚ್ಚು ಸುಖವಾಗಿರುತ್ತವೆ.

ಹುಳಿದ್ರಾಕ್ಷಾರಸದಲ್ಲಿ ಅಣಬೆ ಇದ್ದಂತೆ..... (ಪುಟ ೬೩) ಆದರೆ ನಿಕೋಲಾಯ್‌ನಂತಹ ಕ್ರಾಂತಿಕಾರಿಯ ವಿಚಾರಗಳೇ ಬೇರೆ. ಮತ್ತೆ ಮತ್ತೆ ಜೈಲಿಗೆ ಹೋಗಬೇಕಾಗಿ ಬಂದ ಅವನು "ಕುಟುಂಬ ಜೀವನ ಕ್ರಾಂತಿಕಾರಿಯ ಶಕ್ತೀನ ಕಡಿಮೆಮಾಡುತ್ತೆ..... ಇತರರಿಗಿಂತ ಮುಂದೆ ನಾವು ಸಾಗ್ಬೇಕು, ಯಾಕೆಂದರೆ ಹಳೇ ಜಗತ್ತನ್ನು ನಿರ್ನಾಮ ಮಾಡಿ ಹೊಸ ಜಗತ್ತನ್ನು ನಿರ್ಮಿಸೋದಕ್ಕೋಸ್ಕರ, ಇತಿಹಾಸ ಆಯ್ದುಕೊಂಡಿರೋ ಕಾರ್ಯಕರ್ತರು ನಾವು" ಸಿದ್ಧಾಂತವೊಂದನ್ನು ರೂಪಕದ ಮುಖಾಂತರ ಹೇಳುವ ಕಾದಂಬರಿ ಸೃಜನಶೀಲ ಪ್ರಕಾರದ, ಕಲಾತ್ಮಕತೆಯನ್ನು ಸಹಜವಾಗಿಯೇ ಹೊಂದಿದೆ. ಕಿರಿಯರ ಹೋರಾಟಕ್ಕೆ ಸಹಕಾರವನ್ನು ನೀಡುವ 'ತಾಯಿ'ಯ ಅಂದಿನ 'ಹೆಣ್ಣಿನ' ವ್ಯಕ್ತಿತ್ವದ ಬಗ್ಗೆ ಕಾದಂಬರಿ ಕಾಳಜಿವಹಿಸಿದೆ. ನಿಲೋವ್ನಾಳನ್ನು ಕುರಿತು, ಕ್ರಾಂತಿಕಾರಿ........ ನಿಕೋಲಾಯ್ ಒಮ್ಮೆ ಸೌಹಾರ್ದದ ಮಾತುಕತೆಯ ವೇಳೆ, ತನ್ನ ಮಗನನ್ನು ಪ್ರೀತಿಸುವ ಸಾಷಾಳ ಬಗೆಗೆ ತಾಯಿ ಅಂತಃಕರಣದ ಮಾತುಗಳನ್ನಾಡಿದಾಗ "ನಿಲೋವ್ನ ನೀವು ಪ್ರೀತಿಸೋ ಮನುಷ್ಯನಿಗಾಗಿ ಹಾತೊರೆಯೋದು ಅಂದರೆ ಏನೂಂತ ನಿಮಗೆ ಯಾವತ್ತೂ ಗೊತ್ತಿದ್ದ ಹಾಗೇ ಇಲ್ಲ"... ನೀವು ಯಾರನ್ನೂ ಪ್ರೀತಿಸಿಯೇ ಇರ್ಲಿಲ್ವೆ?" ಎಂದು ಕೇಳಿದಾಗ ತಾಯಿ ಹೇಳುವ ಮಾತು ಇನ್ನೊಂದೇ ಆಯಾಮವನ್ನು ಅನಾವರಣಗೊಳಿಸುತ್ತದೆ. ನನಗೆ ನೆನಪಿಲ್ಲ ಪ್ರೀತಿಸ್ಥೆ ಅಂತ ಕಾಣುತ್ತೆ ಯಾರನ್ನೋ ಪ್ರೀತಿಸಿರ್ಬೇಕು. ಆದರೆ ನೆನಪಿಲ್ಲ ನನ್ನ ಗಂಡ ನನಗೆ ಹೊಡೇದೂ ಹೊಡೆದೂ ಮದುವೆಗೆ ಮುಂಚೆ ಆದದ್ದೆಲ್ಲವನ್ನ ನೆನಪಿಂದ ಅಳಿಸಿಹೋಗೋ ಹಾಗೆ ಮಾಡ್ದ" ಈ ಬಗೆಯ ವಿವರಗಳು 'ತಾಯಿ'ಯ ವ್ಯಕ್ತಿತ್ವದ ಮತ್ತೊಂದು ಮುಖವನ್ನು ತಿಳಿಸುವ ಜತೆಗೆ ಕಾದಂಬರೀ ಬರೀ ಸಿದ್ಧಾಂತ, ವಿಚಾರ, ತರ್ಕಗಳ ಮಂಡನೆಯಲ್ಲ, ಅದು ಜೀವಂತ ಕಥನ ಎಂಬುದನ್ನು ಮತ್ತೆ ಮತ್ತೆ ನೆನಪಿಸುತ್ತವೆ.

ಪಾವೆಲ್ ತಾಯಿಗೆ ತಾವು ಮಾಡುತ್ತಿರುವ ಕೆಲಸದ ವಿಚಾರವನ್ನು ಹೇಳಿ, ಅದು ಎಂತಹ ಅಪಾಯಕಾರಿ ಎಂದು ವಿವರಿಸಿದಾಗ ತಾಯಿಯ ಮನದಲ್ಲಿ ಮೂಡಿದ ಭವಿಷ್ಯದ ಚಿತ್ರವನ್ನು ಗಾರ್ಕಿ ಚಿತ್ರಿಸುವುದು ಹೀಗೆ"

"ಮಗನು, ಶಾಂತವಾದ ಆತ್ಮವಿಶ್ವಾಸದಿಂದ ಬರಲಿರುವ ಅಪಾಯದ ಬಗ್ಗೆ ಮಾತನಾಡಿದ್ದ, ಆ ನಿರೀಕ್ಷೆ ಹೃದಯದಲ್ಲಿ ತೊಯ್ದಾಡಿತು. ರಾತ್ರಿ ಹೊತ್ತು ಪತಂಗ ಕುರುಡಾಗಿ ಪಟಪಟಿಸಿದ ಹಾಗೆ, ಹಿಮಾಚ್ಛಾದಿತ ಬಯಲೊಂದು ತನ್ನೆದುರು ಹರಡಿದ್ದಂತೆ..... ಅದರಡ್ಡವಾಗಿ ಬಿಳಿಯ ಹರಕು ಗಾಳಿಯೊಂದು ಕೀರಲು ಧ್ವನಿ ಹೊರಡಿಸುತ್ತ, ಧಾವಿಸಿ ಬೀಸುತ್ತಿದ್ದ ಹಾಗೆ ಕಾಣಿಸುತ್ತಿತ್ತು. ಬಯಲಿನ ಮಧ್ಯದಲ್ಲಿ ಹುಡುಗಿಯೊಬ್ಬಳ ಸಣ್ಣ ಕರಿಯ ಆಕೃತಿ ಎಡವುತ್ತಾ ಸಾಗಿತ್ತು. ಗಾಳಿ ಅವಳ ಪಾದಗಳ ಸುತ್ತಾ ಸುಳಿದಾಡುತ್ತಿತ್ತು. ಆಕೆಯ ಲಂಗವನ್ನು ಹಾರಿಸುತ್ತಾ ಕೊರೆಯುವ ಹಿಮಕಣಗಳನ್ನೂ ಅವಳ ಮುಖಕ್ಕೆ ಎರಚುತ್ತಾ ಬಲು ಕಷ್ಟದಿಂದ ಆಕೆ ನಡೆಯುತ್ತಿದ್ದಳು.

ಕಿರಿಯ ಪಾದಗಳು ಮಂಜಿನಲ್ಲಿ ಹೂತುಹೋಗುತ್ತಿದ್ದವು. ಎಲ್ಲವೂ ಶೀತಲವಾಗಿತ್ತು. ಭಯಾನಕವಾಗಿತ್ತು. ಶರತ್ಕಾಲದ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಬಾಗಿದ ಏಕಾಂಗಿಯಾದ ಹುಲ್ಲಿನ ಗರಿಯಂತೆ ಅವಳ ಶರೀರ... ಆಕೆಯ ಬಲಗಡೆ ಕೆಸರಿನ ಮೇಲೆ ಕಪ್ಪುಗೋಡೆ ರೂಪದಲ್ಲಿ ಅಡವಿಯಿತ್ತು. ಅಲ್ಲಿ ತೆಳ್ಳನೆ ಬರ್ಜ್ ಮರಗಳ ಮೈಬಿಟ್ಟ ಆಸ್ಪೆನ್ ಮರಗಳೂ ತಬ್ಬಲಿಗಳಂತೆ ಪಿಸುಗುಡುತ್ತಿದ್ದವು...." ತಾಯಿಗೆ ಭವಿಷ್ಯದ ದಾರಿ ಕಂಡ ಬಗೆಯಿದು. ಕಾದಂಬರಿಯಿಂದ ಲಯಕ್ಕೆ ತಕ್ಕಂತೆ ವಸಂತ, ಶಿಶಿರಗಳ ವರ್ಣನೆ ಬಳಕೆಯಾಗಿದೆ.

ಗಾರ್ಕಿಯ ಕವಿ ಮನಸ್ಸು ಬಳಸುವ ಉಪಮೆ, ರೂಪಕಗಳು ಭಾಷೆಯನ್ನು ಸೂಕ್ಷ್ಮಗೊಳಿಸಿವೆ. 'ಜಪಸರದ ಮಣಿಗಳಂತೆ ದಿನಗಳು ಒಂದರ ಮೇಲೊಂದಾಗಿ ಉರುಳಿದವು (ಪುಟ-೫೫) 'ಪಂಜರದಲ್ಲಿಟ್ಟ ಮೈನಾ ಹಕ್ಕಿಯನ್ನು ಹೋಲುತ್ತಿದ್ದನಾತ' ಪುಟ-೧೬೫, ಅವನ ತುಟಿಗಳು ಸತ್ತಿವೆ, ಆದರೆ ಅವನ ಮಾತುಗಳು ಬದುಕಿರುವವರ ಹೃದಯದಲ್ಲಿ ಬಾಳುತ್ತವೆ"

ಈ ಬಗೆಯ ಬರವಣಿಗೆ ಕಾದಂಬರಿಯುದ್ದಕ್ಕೂ ಕಂಡುಬರುತ್ತದೆ. ಮಗು ಪಾವೆಲ್‌ನನ್ನು, ಸ್ನೇಹಿತರನ್ನೂ, ಪೊಲೀಸರು ಬಂಧಿಸಿದ ಮರುದಿನ ಬೀದಿಯೆಲ್ಲ ಶಾಂತವಾಗಿತ್ತು, ತಾಯಿ ನಡೆದು ಹೋದ ಸಂಗತಿಗಳನ್ನು ಕುರಿತು ಚಿಂತಿಸುವಾಗ ಹಳೆಯ ಸಂಗತಿಯೊಂದು ಆಕೆಗೆ ನೆನಪಾಯಿತು. ಆಕೆಯ ಹಳ್ಳಿಯ ಜಮೀನ್ದಾರನ ಖಾಸಗಿ ಉದ್ಯಾನದಲ್ಲಿ ಕೆರೆಯೊಂದಿತ್ತು. ಒಂದು ಸಂಜೆ ಆ ಕೆರೆ ದಡದಲ್ಲಿ ನಡೆಯುವಾಗ ಕೆರೆಯ ನಡುವೆ ದೋಣಿಯೊಂದು ಕಣ್ಣಿಗೆ ಬಿತ್ತು. ಕೆರೆ ಕಪ್ಪಿಗಿತ್ತು, ಶಾಂತವಾಗಿತ್ತು. ದೋಣಿ ಚಲಿಸುತ್ತಿರಲಿಲ್ಲ. ಕರಿನೀರಿಗೆ ಅದನ್ನು ಅಂಟಿಸಿದ್ದಂತೆ ತೋರುತ್ತಿತ್ತು. ಒಂಟಿ ದೋಣಿ-ಮನುಷ್ಯನಿಲ್ಲ ಚುಕ್ಕಾಣಿಯಿಲ್ಲ...........ಚಲಿಸದೆ ನಿಂತಿತ್ತು. ಆ ದೃಶ್ಯ ಯಾವುದೋ ಅರಿಯದ ಯಾತನೆಯ ಆಳವಾದ ದುಃಖವನ್ನು ಸೂಚಿಸುತ್ತಿತ್ತು. ಯಾರು, ಯಾತಕ್ಕಾಗಿ ಆ ದೋಣಿಯನ್ನು ನೀರೊಳಕ್ಕೆ ತಳ್ಳಿರಬಹುದು?.... (ಪುಟ-೨೩೮) ಆ ಸಂಜೆ ತೋಟದ ಮೇಸ್ತ್ರಿಯ ಗುಂಗುರು ಕೂದಲಿನ ಪುಟ್ಟ ಹೆಂಗಸು ಕೆರೆಯಲ್ಲಿ ಮುಳುಗಿ ಸತ್ತಳೆಂದು ತಿಳಿಯಿತು.

ಈ ಕಾದಂಬರಿಯು ತೀವ್ರವಾಗಿ ಮನಸ್ಸಿಗೆ ಮುಟ್ಟುವ ನಿರೂಪಣೆ ಮತ್ತು ಗಟ್ಟಿ ವಸ್ತುವಿನಿಂದಾಗಿ ನಾಟಕಕಾರ ಬ್ರೆಕ್ಟ್ ಇದನ್ನಾಧರಿಸಿ 'ಮದರ್' ಹೆಸರಿನ ನಾಟಕವೊಂದನ್ನು ಬರೆದು ಅದು ಪ್ರಪಂಚದ ಬೇರೆ ಬೇರೆ ಭಾಷೆಗಳಿಗೆ ಅನುವಾದವಾಗಿ ರಂಗದ ಮೇಲೂ ಯಶಸ್ವಿಯಾಗಿದೆ. ಶ್ರೀ ಕೆ.ವಿ. ಸುಬ್ಬಣ್ಣ ಈ ನಾಟಕವನ್ನು 'ತಾಯಿ' ಎಂದು ಕನ್ನಡಕ್ಕೆ ಅನುವಾದಿಸಿದ್ದಾರೆ. ನೀನಾಸಂ ಕಲಾವಿದರು ಈ ನಾಟಕವನ್ನು ಅಭಿನಯಿಸಿದ್ದಾರೆ.

ಕಾರ್ಖಾನೆಯ ಸುತ್ತಲಿದ್ದ ಜವುಗು ಪ್ರದೇಶ ಸೊಳ್ಳೆಗಳ ವಾಸಸ್ಥಾನವಾಗಿದ್ದು ಕಾರ್ಮಿಕರು ಜ್ವರದಿಂದ ಬಳಲುತ್ತಿದ್ದರು, ಈ ಜವುಗನ್ನು ಒಣಗಿಸಿ 'ಪೀಟ್' ಹೆಪ್ಪು

ತಯಾರಿಸಲು ಕಾರ್ಮಿಕರಿಂದಲೇ ಹಣ ವಸೂಲಿ ಮಾಡಲಾಯಿತು. ಇದೂ ಕೂಡಾ ಮನುಷ್ಯ ವಾಸಿಸಲು ಯೋಗ್ಯವಲ್ಲದ ಕೊಳೆಗೇರಿಗಳು ನಮ್ಮ ನಗರಗಳಲ್ಲಿರುವುದನ್ನು ನೆನಪಿಸುತ್ತದೆ. ಒಂದೆಡೆ ಕ್ರೆಮ್ಲಿನ್ ಅರಮನೆ ಇನ್ನೊಂದೆಡೆ ಮನುಷ್ಯ ವಸತಿಗೆ ಯೋಗ್ಯವಲ್ಲದ ಜಾಗದಲ್ಲಿ ವಾಸಿಸಬೇಕಾದ ಜನ. ಕಾದಂಬರಿಯ ಈ ಸನ್ನಿವೇಶಗಳನ್ನು ಓದುವಾಗ ನನಗೆ ತೇಜಸ್ವಿಯವರ 'ಜುಗಾರಿಕ್ರಾಸ್' ಕಾದಂಬರಿಯಲ್ಲಿ ಮೇದರಹಳ್ಳಿಯ ಅವಸಾನ ಕುರಿತು ಬರೆಯುತ್ತಾ ತೇಜಸ್ವಿ "ಹಾಗಾದರೆ ಏಕೆ ಈ ಹಳ್ಳಿ ಹಾಳೂರಾಯ್ತು? ಏಕೆ ಕೋಟೆ ಕೊತ್ತಲಗಳು ಏಳುತ್ತವೆ, ನಾಶವಾಗುತ್ತವೆ? ಸೂರ್ಯ ಮುಳುಗದ ಸಾಮ್ರಾಜ್ಯಗಳ ಚಕ್ರಾಧಿಪತ್ಯಗಳೂ ನಿಧಾನವಾಗಿ ಚರಿತ್ರೆಯ ಪುಟಗಳಲ್ಲಿ ಅಸ್ತಂಗತವಾಗುತ್ತವೆ?" (ಜುಗಾರಿಕ್ರಾಸ್ ಪುಟ ೯) ಎಂಬ ಸಂದರ್ಭ ನೆನಪಾಯಿತು. ಪ್ಲಾಸ್ಟಿಕ್ ಹಳ್ಳಿಹಳ್ಳಿಗಳಿಗೂ ಹಬ್ಬಿ ಕಾಫಿಗಿಡಗಳನ್ನು ಪ್ಲಾಸ್ಟಿಕ್ ಕವರ್‌ನಲ್ಲಿ ನೆಟ್ಟು ಬೆಳೆಸತೊಡಗಿದಾಗ ಮೇದರು ಪಟ್ಟಣಗಳಿಗೆ ವಲಸೆ ಹೋಗುತ್ತಾರೆ ಅವರ ಹಳ್ಳಿ ಹಾಳೂರಾಗುತ್ತದೆ. ಆಧುನಿಕತೆ ಕಾರ್ಖಾನೆ ಉತ್ಪನ್ನಗಳು ಎರಡು ಬಾಯಿನ ಕತ್ತಿಯಂತೆ ಹೀಗೆ ಕಾರ್ಖಾನೆ ಕಾರ್ಮಿಕರ ಬಾಳನ್ನು ನರಕಗೊಳಿಸುವ ಜೊತೆಗೆ, ಅವರು ತಯಾರಿಸುವ ಯಾಂತ್ರಿಕ ಉತ್ಪನ್ನಗಳು ಯಾರೊ ಹಳ್ಳಿಗರು ತಯಾರಿಸುತ್ತಿದ್ದ ಕೈಕೆಲಸದ ಉತ್ಪನ್ನವನ್ನು ಮೂಲೆ ಗುಂಪಾಗಿಸಿ ಅವರ ಬದುಕನ್ನೂ ನಾಶಗೊಳಿಸುತ್ತದೆ. ಇಂದಿನ ಜಾಗತೀಕರಣದ ದ್ವಂದ್ವಗಳನ್ನೂ ಗೊಂದಲಗಳನ್ನೂ ಹೇಗೆ ಎದುರಿಸಬೇಕೆಂದು ತಿಳಿಯದೆ ಕವಲುದಾರಿಯಲ್ಲಿ ನಿಂತಿರುವ ಕೃಷಿ ಕಾರ್ಮಿಕರು ಗಾರ್ಕಿಯ ಕಾದಂಬರಿಯ ಕನ್ನಡಿಯಲ್ಲಿ ಬಿಂಬಿಸುತ್ತಿದ್ದಾರೆಯೇ? ಎಂಬ ಪ್ರಶ್ನೆ ಮನಸ್ಸಿನೆದುರು ಮೂಡುತ್ತದೆ. ಹಿಂಸಾತ್ಮಕ ಕ್ರಾಂತಿ ೨೧ನೇ ಶತಮಾನದ ಅಗತ್ಯವಲ್ಲ ಎಂಬ ಎಚ್ಚರದೊಡನೆ ಆರೋಗ್ಯಕರ ಸಮಾಜವನ್ನು ರೂಪಿಸುವ ಹೊಣೆ ಪ್ರತಿಯೊಬ್ಬರದೂ ಎಂಬ ಸಾಮಾಜಿಕ ಅರಿವನ್ನು ಕಾದಂಬರಿ ಮೂಡಿಸುತ್ತದೆ.





# ಮೂರನೇ ಹೆಣ್ಣು

ಮೂಲ: ಅಮೃತಾಪ್ರೀತಂ
ಕನ್ನಡಕ್ಕೆ : ಡಾ.ಆರ್. ಲಕ್ಷ್ಮಿನಾರಾಯಣ

ಚಟ್ಟಗಳು ಮನೆಯಿಂದ ಹೊರಕ್ಕೆ ಹೋಗುತ್ತವೆ. ಆದರೆ ಮೀನಾ ತನ್ನ ತವರಿಗೆ ಬಂದಾಗ ಎಲ್ಲರಿಗೂ ಒಂದು ಚಟ್ಟ ಮನೆಯೊಳಕ್ಕೆ ಒಂದು ಬಿಟ್ಟಿತೇನೋ ಅನ್ನಿಸಿತು.

ಸರ್ಕಾರಿ ಮುದ್ರೆಗಳನ್ನು ಒತ್ತಿಸಿಕೊಂಡ, ಮೀನಾಳ ಶವದ ಬಟ್ಟೆಯಂತಿದ್ದ ಒಂದು ಪತ್ರ ಬಂದಿತು. ಅದರಲ್ಲಿ ಮೀನಾಳ ಸಾವಿನ ಸುದ್ದಿಯೇನೂ ಇರಲಿಲ್ಲವಾದರೂ ಅವಳ ಚೆಲುವ ಯೋಧ' ದೇಶದ ಗಡಿಯಲ್ಲಿ ಮರಣಹೊಂದಿದ ಸುದ್ದಿ ಇತ್ತಾದ್ದರಿಂದ ಅದು ಮೀನಾಳ ಶವದ ಬಟ್ಟೆಯಂತಿತ್ತು.

ಕೆಲವೊಂದು ಸಂಗತಿಗಳನ್ನು ಹೆಂಗಸು ಸಹಜವಾಗಿಯೇ ಗ್ರಹಿಸುತ್ತಾರೆ. ಇದೂ ಅಂಥವೇ ಒಂದು ಸತ್ಯ ಸಂಗತಿಯಾಗಿತ್ತು. ಅದೆಂದರೆ ಗಂಡಸು ಒಮ್ಮೆ ಮಾತ್ರ ಸಾಯುತ್ತಾನೆ. ಆದರೆ ಅವನ ಸಾವಿನ ನಂತರ ಅವನ ಹೆಂಡತಿ ಬದುಕಿರುವಷ್ಟು ಕಾಲದಲ್ಲಿ ಅದೆಷ್ಟು ಸಲ ಸಾಯುತ್ತಾಳೋ ಗೊತ್ತಿಲ್ಲ.

ಹಾಗಾಗಿ ಮೀನಾ ಚಟ್ಟದ ಹಾಗೆ ತೌರಿಗೆ ಬಂದಾಗ ಮನೆಯ ಮೂಕಗೋಡೆಗಳೂ ಅಯ್ಯೋ ಅಯ್ಯೋ ಎನ್ನತೊಡಗಿದವು.

ದೇವರು ಮನುಷ್ಯನ ನಾಲಗೆ ಕತ್ತರಿಸಿಬಿಟ್ಟಾಗ ಅವನು ಏನೂ ಮಾತನಾಡಲಾರ. ಮೀನಾಳ ತಂದೆ

ತಾಯಿಗಳು ಮೂಕರ ಹಾಗ ಇದ್ದು ಬಿಟ್ಟರು. ಮನೆ ತೆರೆದಿತ್ತು. ಮನೆಯ ಜೀವಿಗಳಿಗೆ ತಮ್ಮದೇ ಆದ ಸೂರು ಮತ್ತು ಗೋಡೆಗಳಿದ್ದುವು. ಅತಿ ಚಿಕ್ಕ ಮಗುವಿಗೂ ಅದರ ಹೆಸರಿನಲ್ಲಿ ತನ್ನದೇ ಆದೊಂದು ಪಾಲು ಇತ್ತು. ಹಾಗಾಗಿ ಮೀನಾಳು ಮನೆಗೆ ಬಂದಾಗ, ಹಿಂದೆ ಸ್ಕೂಲಿನಿಂದಲೋ ಕಾಲೇಜಿನಿಂದಲೋ ಬಂದಾಗ ಹೇಗೆ ತನ್ನ ಕೊಠಡಿಗೆ ಹೋಗುತ್ತಿದ್ದಳೋ ಹಾಗೆಯೇ ನೇರವಾಗಿ ತನ್ನ ಕೊಠಡಿಗೆ ಹೋಗಿ ಬಿಟ್ಟಳು.

ಆದರೆ ಮೊದಲಿಗೆ ಮಾಮೂಲಿಯಾಗಿ ತೆರೆಯುತ್ತಿದ್ದಂಥ ಹಾಗೂ ಮುಚ್ಚುತ್ತಿದ್ದಂಥ ಬಾಗಿಲುಗಳು ಕಳೆದ ಇಪ್ಪತ್ತು ವರ್ಷಗಳಿಂದ ಶಾಪಗ್ರಸ್ತವಾಗಿ ಬಿಟ್ಟದ್ದುವು. ಈಗ ಅವು ವಿವಾಹ ಅಥವಾ ವಿಚ್ಛೇದನ. ಹುಟ್ಟು ಅಥವಾ ಸಾವಿನಂಥ ಘಟನೆಗಳಿಗೆ ಮಾತ್ರ ತೆರೆದುಕೊಳ್ಳುತ್ತಿದ್ದುವು ಮತ್ತು ಮುಚ್ಚಿಕೊಳ್ಳುತ್ತಿದ್ದವು.

ವೃದ್ಧ ತಂದೆತಾಯಿಗಳ ನಡುವೆ ಘಟನೆಗಳನ್ನು ಕೆಲವೊಮ್ಮೆ ಸಂತಸದ ಕಣ್ಣುಗಳಿಂದ ನೋಡುತ್ತಿದ್ದರೆ. ಇನ್ನು ಕೆಲವೊಮ್ಮೆ ಒದ್ದೆ ಕಣ್ಣುಗಳಿಂದ ನೋಡುತ್ತಿದ್ದರು.

ಇಂದಿಗೆ ಇಪ್ಪತ್ತು ವರ್ಷಗಳ ಹಿಂದೆ ಮೀನಾಳ ಅಕ್ಕನ ಮದುವೆಯ ಸಂದರ್ಭದಲ್ಲಿ ಅವಳ ಕೋಣೆಯನ್ನು ವಿವಾಹದ ಆ ಘಟನೆ ತನ್ನ ಕೈಗಳಿಂದ ಮುಚ್ಚಿತ್ತು. ಆದರೆ ಎರಡು ವರ್ಷಗಳ ನಂತರ ಮಗು ಹುಟ್ಟಿದಾಗ ತನ್ನ ತವರಿಗೆ ಹೋದ ಸಂದರ್ಭದಲ್ಲಿ ಮಗುವಿನ ಜನನದ ಘಟನೆ ತನ್ನ ಕೈಯಿಂದ ಅವಳ ಕೋಣೆಯ ಬಾಗಿಲನ್ನು ತೆರೆಸಿತ್ತು. ಮತ್ತೆ ಅವಳು ನಲವತ್ತು ದಿನಗಳಲ್ಲಿ ಹಾಲು ಕುಡಿವ ಹಸುಗೂಸನ್ನು ಹಿಂದೆ ಬಿಟ್ಟು ತೀರಿಕೊಂಡಾಗ. ಸಾವು ತನ್ನ ಕೈಯಿಂದ ಕೊಠಡಿಯ ಬಾಗಿಲನ್ನು ಮುಚ್ಚಿಬಿಟ್ಟಿತ್ತು. ನವಜಾತ ಶಿಶುವನ್ನು ಅದರ ತಾತನ ಮನೆಯವರು ಮೊದಲು ಕರೆದುಕೊಂಡು ಹೋಗಿದ್ದರು. ಅನಂತರ ಆ ಪುಟ್ಟ ಮಗುವನ್ನು ಸಂಭಾಳಿಸುವುದು ಕಷ್ಟ ಎನ್ನಿಸಿದಾಗ, ಆ ಗಂಡು ಮಗುವನ್ನು ಅದರ ತಾಯಿಯ ತೌರು ಮನೆಗೆ ಕಳಿಸಿಬಿಟ್ಟರು. ಈ ಘಟನೆಯಾದರೋ ಆ ಬಾಲಕನ ಪುಟ್ಟ ಪುಟ್ಟ ಕೈಗಳಿಂದ ಆ ಕೊಠಡಿಯ ಬಾಗಿಲನ್ನು ಮತ್ತೆ ತೆರೆಸಿತು.

ಇದೇ ರೀತಿ ಮೀನಾಳ ಸೋದರ ಹನ್ನೆರಡು ವರ್ಷಗಳ ಹಿಂದೆ ಯೂನಿವರ್ಸಿಟಿಯ ಹಾಸ್ಟೆಲ್‌ನಲ್ಲಿ ವಾಸಿಸಲು ಮನೆಬಿಟ್ಟು ಹೊರಟು ಹೋದಾಗ. ಅವನ ಕೊಠಡಿಯ ಬಾಗಿಲನ್ನು ಮಾಮೂಲಿ ಕೈಗಳು ಮುಚ್ಚಿ ಬಿಟ್ಟಿದ್ದುವು. ಆದರೆ ಐದು ವರ್ಷಗಳ ನಂತರ ಆಗಿನ ಘಟನೆಯೋ ತನ್ನ ಕೈಗಳಿಂದ ಬಾಗಿಲನ್ನು ತೆರೆಯಿತು. ಅವನು, ಯೂನಿವರ್ಸಿಟಿಯಲ್ಲಿ ಓದುತ್ತಿದ್ದ ಬೇರೊಂದು ಜಾತಿಗೆ ಸೇರಿದ ಹುಡುಗಿಯನ್ನು ಆ ಹುಡುಗಿಯ ತಂದೆ ತಾಯಿಗಳ ಕಣ್ ತಪ್ಪಿಸಿ ಕರೆದುಕೊಂಡು ಹೋಗಿ ಮದುವೆ ಮಾಡಿಕೊಂಡು ಮನೆಗೆ ಕರೆ ತಂದಿದ್ದ. ಕೋಣೆಯ ಬಾಗಿಲು ತೆರೆದು ಕೊಂಡಿತು. ರೇಷ್ಮೆಯ ಪರದೆಗಳು ಅದನ್ನು ಆವರಿಸಿಕೊಂಡವು. ಅನ್ನದ ತಪ್ಪಲೆಯಿಂದ ಹಾಗೂ

ಮಾಂಸ ಬೇಯುತ್ತಿರುವ ಪಾತ್ರೆಯಿಂದ ವಾಸನೆ ಹೊರಹೊಮ್ಮುವಂತೆ ಕೊಠಡಿಯಿಂದ ಯೌವನದ ಮೋದದ ಸುವಾಸನೆ ಹೊರಹೊಮ್ಮತೊಡಗಿತು. ಆದರೆ ಹೇಗೋ ಕಷ್ಟದಿಂದ ಒಂದು ವರ್ಷ ಕಳೆದಿತ್ತೋ ಏನೋ ಅಚಾನಕ್ ಆಗಿ ಆದ ಮದುವೆಯಂತೆಯೇ ಅಚಾನಕ್ ಆಗಿ ಆದ ವಿಚ್ಛೇದನವು ಆ ಕೋಣೆಯ ಬಾಗಿಲನ್ನು ಮುಚ್ಚಿಸಿಬಿಟ್ಟಿತು.

ಈಗ್ಗೆ ಮೂರು ವರ್ಷಗಳ ಹಿಂದೆ ಮೀನಾಳ ಮದುವೆಯ ಘಟನೆಯಿಂದ ಮುಚ್ಚಲ್ಪಟ್ಟಿದ್ದ ಕೊಠಡಿಯನ್ನು ಅವಳ ವೈಧವ್ಯವು ಈಗ ತನ್ನ ಕೈಗಳಿಂದ ತೆರೆದು ಬಿಟ್ಟಿತು.

ಈ ಕೊಠಡಿಯಿಂದ ಮೀನಾ ಪಲ್ಲಕ್ಕಿಯ ಹಾಗೆ ಹೊರ ಹೋಗಿದ್ದಳು. ಈಗ ಚಟ್ಟದ ಹಾಗೆ ಒಳಕ್ಕೆ ಪ್ರವೇಶಿಸಿದಳು ಅವಳ ವೃದ್ಧಮಾತಾಪಿತರು ಇದೆಲ್ಲವನ್ನೂ ನೋಡಲೆಂದೇ 'ವಿಧಿಯು ಕೈಗಳನ್ನು ಕಟ್ಟಿಹಾಕಿನಿಲ್ಲಿಸಿದ ನೋಟಕರಂತೆ' ಇದ್ದರು.

ಮೀನಾಳ ಸೋದರ ಮರ್ಚೆಂಟ್‌ನೇವಿಯಲ್ಲಿದ್ದು ಈಗ ಎರಡು ವರ್ಷದಿಂದ ದೇಶದ ಹೊರಗೆ ಇದ್ದ. ಗತಿಸಿದ ಮೀನಾಳ ಅಕ್ಕನ ಮಗ ಇದೀಗ ಹದಿನೆಂಟು ವರ್ಷದ ಯುವಕನಾಗಿದ್ದ. ಕಳೆದ ಎರಡು ವರ್ಷಗಳಿಂದ ದೂರದ ಪಟ್ಟಣದಲ್ಲಿ ಕಾಲೇಜಿನಲ್ಲಿ ಓದುತ್ತಿದ್ದು ಹಾಸ್ಟೆಲ್‌ನಲ್ಲಿ ಇರುತ್ತಿದ್ದ. ಇನ್ನು ಮನೆಯ ಕೊಠಡಿಗಳು ಯಾವು ತೆರೆದಿದ್ದುವೋ ಯಾವು ಮುಚ್ಚಿದ್ದುವೋ! ಅವು ಮೀನಾಳನ್ನು ನೋಡಿ ತ್ರಾಹಿತ್ರಾಹಿ ಎನ್ನತೊಡಗಿದವು.

ವೃದ್ಧ ತಂದೆಯ ಕಣ್ಣುಗಳಲ್ಲಿ ಇನ್ನೂ ಹೆಚ್ಚಿನದನ್ನು ನೋಡುವ ಶಕ್ತಿ ಕಮ್ಮಿಯಾಯಿತೇನೋ, ಕಣ್ಣುಗಳಿಗೆ ಪೂ ಬಂದಿತು.

ಸರ್ಕಾರಿ ಮುದ್ರೆಗಳನ್ನು ಒತ್ತಿಸಿಕೊಂಡ ಪತ್ರವೊಂದು ಹಿಂದೊಂದು ದಿನ ಮೀನಾಳ ಶವದ ಬಟ್ಟೆಯ ಹಾಗೆ ಬಂದಿತ್ತಲ್ಲ ಅಂಥವೇ ಪತ್ರ ಮತ್ತೊಮ್ಮೆ, ಮಗುದೊಮ್ಮೆ ಬಂದಿತು. ಮನೆಯ ಮೇಲೆ ಕೆಲವೊಂದು ಹೂವುಗಳು ಮೂಡಿ ಬರುವಂತೆ ಅವು ಬಂದುವು. ಸರ್ಕಾರ ಯುದ್ಧದಲ್ಲಿ ಮಡಿದ ಯೋಧರ ವಿಧವೆಯರಿಗೆ ನೆರವು ನೀಡಲು ಬಯಸುತ್ತದೆ. ಅದಕ್ಕಾಗಿ ಅವರಿಗೆ ಮನೆಕಟ್ಟಿಕೊಳ್ಳಲು ಜಮೀನು ಕೊಡುತ್ತವೆ, ಅದರ ಜೊತೆಗೆ ಉದ್ಯೋಗವನ್ನು ನೀಡುತ್ತದೆ ಎಂದು ಅದರಲ್ಲಿ ಬರೆದಿತ್ತು. ಉದ್ಯೋಗ ನೀಡುವ ಸಂಬಂಧದಲ್ಲಿ ಸರ್ಕಾರವು ಅವರ ಇಚ್ಛೆಯನ್ನು ಕೇಳಿತ್ತು–ಸಣ್ಣ ಕೈಗಾರಿಕೆ ನಡೆಸುವುದಿದ್ದರೆ ಬೇಕಾದರೆ ಹಣ ತೆಗೆದುಕೊಳ್ಳಬಹುದು, ಅದು ಬೇಡ ಎಂದರೆ ಸೈನಿಕ ಶಾಲೆಗಳಲ್ಲಿ ನೌಕರಿ ಪಡೆದುಕೊಳ್ಳಬಹುದು ಎಂದು.

ಆದರೆ ಚಟ್ಟದ ಮೇಲಿನ ಹೂಗಳಂತಿದ್ದ, ಸರ್ಕಾರಿ ಮುದ್ರೆಗಳನ್ನು ಒತ್ತಿಸಿಕೊಂಡ ಈ ಪತ್ರಗಳನ್ನು ಮೀನಾ ಕೈಗೆ ತೆಗೆದುಕೊಂಡು ಹೊಸಕಿ ಹಾಕಿದಳು. ಅವಳ ಅಂತರ್ಯದ

ಒಂದು ಭಾಗ ಎಷ್ಟರ ಮಟ್ಟಿಗೆ ಸತ್ತು ಹೋಗಿತ್ತೆಂದರೆ ಈಗ ಅದಕ್ಕೆ ಯಾವುದೇ ಹೂವಿನ ಸುವಾಸನೆ ತಟ್ಟುತ್ತಿರಲಿಲ್ಲ. ಅವಳು ಇಡೀದಿನ, ಹಗಲು ರಾತ್ರಿಯೆನ್ನದೆ ಮಂಚದ ಮೇಲೆ ಒಂದು ಶವದಂತೆ ಬಿದ್ದಿರುತ್ತಿದ್ದಳು.

ಮೀನಾಳ ಸೋದರ ನಾಡಿನಿಂದ ದೂರ ಇದ್ದ. ಹೀಗಾಗಿ ನಾಲ್ಕು ದಿನಕ್ಕಾದರೂ ಸರಿ ಬಂದು ಹೋಗಲು ಆಗುತ್ತಿರಲಿಲ್ಲ. ಆದರೆ ಅವಳ ಅಕ್ಕನ ಮಗ ಅವಿನಾಶ್ ನಗರದ ಹಾಸ್ಟೆಲ್‌ನಿಂದ ಮನೆಗೆ ಬಂದು ಬಿಟ್ಟ. ಅವಿನಾಶ್ ಜೀವನದಲ್ಲಿ ತಾಯಿಯ ಮುಖ ನೋಡಿರಲಿಲ್ಲ ಮತ್ತು ಹುಟ್ಟಿದಾಗಿನಿಂದ ತನ್ನೊಂದಿಗೆ ಆಟ ಆಡುವವರನ್ನು ಯಾರನ್ನೂ ಕಂಡಿರಲಿಲ್ಲ. ಆದರೆ ಅವರೆಲ್ಲರ ಜಾಗದಲ್ಲಿ ಕೇವಲ ಮೀನಾಳನ್ನು ಮಾತ್ರ ಕಂಡಿದ್ದ. ಅವನು ಮೀನಾಳ ಬಳಿಗೆ ಓಡಿ ಬಂದಾಗ ಮೀನಾ ಅವನನ್ನು ತಬ್ಬಿಕೊಂಡು ಮೊದಲ ಬಾರಿಗೆ ಅದುವರೆಗೆ ತಡೆದಿದ್ದ ಅಳುವನ್ನು ಅತ್ತಳು.

ಬಹುಶಃ ಅವನನ್ನು ತಬ್ಬಿಕೊಂಡು ಅಲ್ಲ, ಅವನಿಗೆ ತೆಕ್ಕೆಬಿದ್ದು ಮೀನಾ ತನ್ನ ತೊಡೆಯ ಮೇಲಿಟ್ಟುಕೊಂಡು ಸಾಕಿ ಬೆಳೆಸಿ ದೊಡ್ಡವನನ್ನಾಗಿ ಮಾಡಿದ್ದ ಅವಿನಾಶ್ ಈಗ್ಗೆ ಮೂರು ವರ್ಷಗಳ ಹಿಂದೆ ಹುಡುಗನ ಹಾಗಿದ್ದ ಈಗ ನೋಡಿದರೆ ಮೀನಾಳಿಗಿಂತಲೂ ಸರಿಯಾಗಿ ನಾಲ್ಕು ಅಂಗುಲ ಎತ್ತರಕ್ಕೆ ಬೆಳೆದು ನಿಂತ ಗಂಡು! ಊಟ ಬಡಿಸುವುದಕ್ಕೆಂದು ಬರುತ್ತಿದ್ದ ಮೀನಾಳ ತಾಯಿ ಬರಿಗ್ಕೈಲಿ ವಾಪಸಾಗುತ್ತಿದ್ದಳು. ಈಗ ಅವಿನಾಶ್ ಕೈಯಲ್ಲಿ ಊಟದ ತಟ್ಟೆ ಹಿಡಿದು ಕೊಂಡು ಮೀನಾಳ ಹತ್ತಿರ ಬಂದು– "ಏಳು ಮೀನೂ! ಊಟ ಮಾಡೋಣ!" ಎಂದು ಹೇಳಿದಾಗ ಮೊದಲ ಬಾರಿಗೆ ಮೀನಾಳ ಹಸಿವು ಜಾಗೃತಗೊಂಡಿತು. ಅವಳು ಮೊದಲ ಸಲಕ್ಕೆ ಅವಿನಾಶನ ಜೊತೆ ಮನಃಪೂರ್ತಿಯಾಗಿ ಊಟ ಮಾಡಿದಳು.

ಮೀನಾಳ ಹಸಿವನ್ನು ಜಾಗೃತಗೊಳಿಸಿದ್ದು ರೊಟ್ಟಿಯ ವಾಸನೆ ಅಲ್ಲ. ಅವಿನಾಶನ ಬಾಯಿಂದ ಹೊರಟ "ಮೀನೂ" ಎಂಬ ಶಬ್ದದಿಂದ ಹೊಮ್ಮಿದ ವಾಸನೆ.

ಮೀನಾ ಇದುವರೆಗೆ ಬದುಕಿನಲ್ಲಿ ಎಲ್ಲರಿಗೂ 'ಮೀನಾ' ಆಗಿದ್ದಳು, ಅಥವಾ 'ಮೀನಾಜೀ' ಆಗಿದ್ದಳು. ಆದರೆ ಅವಿನಾಶನಿಗೆ ಮೊದಲಿನಿಂದಲೂ 'ಮೀನೂ' ಆಗಿದ್ದಳು. ಅವನನ್ನು ಬಿಟ್ಟರೆ ಅವಳ ಮುದ್ದಿನ ವೀರ ಸಿಪಾಯಿಗೆ ಜೀವನದಲ್ಲಿ 'ಮೀನೂ' ಆಗಿದ್ದಳು.

ಯಾರು ಮೀನಾಳನ್ನು 'ಮೀನಾ' ಎಂದು ಕರೆಯುತ್ತಿದ್ದರೋ, ಅವರು ಅವಳನ್ನು ಯಾವಾಗಲೂ ಅವಳ ವಯಸ್ಸಿಗಿಂತ ಚಿಕ್ಕವಳನ್ನಾಗಿ ಕಾಣುತ್ತಿದ್ದರು. 'ಮೀನಾಜೀ' ಎಂದು ಕರೆಯುತ್ತಿದ್ದವರು, ಅವಳನ್ನು ಅವಳ ವಯಸ್ಸಿಗಿಂತ ದೊಡ್ಡವಳನ್ನಾಗಿ ಬಿಡುತ್ತಿದ್ದರು.

ಅವಳಿಗಿಂತ ಹತ್ತು ವರ್ಷದ ಚಿಕ್ಕವನಾಗಿದ್ದರೂ ತನ್ನ ತೊದಲು ಮಾತಿನಲ್ಲಿ ಅವಳನ್ನು ಮೀನೂ ಎಂದು ಕರೆದಾಗ ಅವಿನಾಶ್ ಅವಳನ್ನು ತನ್ನ ಓರಗೆಯ

ಮಾಂಸ ಬೇಯುತ್ತಿರುವ ಪಾತ್ರೆಯಿಂದ ವಾಸನೆ ಹೊರಹೊಮ್ಮುವಂತೆ ಕೊಠಡಿಯಿಂದ ಯೌವನದ ಮೋದದ ಸುವಾಸನೆ ಹೊರಹೊಮ್ಮತೊಡಗಿತು. ಆದರೆ ಹೇಗೋ ಕಷ್ಟದಿಂದ ಒಂದು ವರ್ಷ ಕಳೆದಿತ್ತೋ ಏನೋ ಅಚಾನಕ್ ಆಗಿ ಆದ ಮದುವೆಯಂತೆಯೇ ಅಚಾನಕ್ ಆಗಿ ಆದ ವಿಚ್ಛೇದನವು ಆ ಕೋಣೆಯ ಬಾಗಿಲನ್ನು ಮುಚ್ಚಿಸಿಬಿಟ್ಟಿತು.

ಈಗ್ಗೆ ಮೂರು ವರ್ಷಗಳ ಹಿಂದೆ ಮೀನಾಳ ಮದುವೆಯ ಘಟನೆಯಿಂದ ಮುಚ್ಚಲ್ಪಟ್ಟಿದ್ದ ಕೊಠಡಿಯನ್ನು ಅವಳ ವೈಧವ್ಯವು ಈಗ ತನ್ನ ಕೈಗಳಿಂದ ತೆರೆದು ಬಿಟ್ಟಿತು.

ಈ ಕೊಠಡಿಯಿಂದ ಮೀನಾ ಪಲ್ಲಕ್ಕಿಯ ಹಾಗೆ ಹೊರ ಹೋಗಿದ್ದಳು. ಈಗ ಚಟ್ಟದ ಹಾಗೆ ಒಳಕ್ಕೆ ಪ್ರವೇಶಿಸಿದಳು ಅವಳ ವೃದ್ಧಮಾತಾಪಿತರು ಇದೆಲ್ಲವನ್ನೂ ನೋಡಲೆಂದೇ 'ವಿಧಿಯು ಕೈಗಳನ್ನು ಕಟ್ಟಿಹಾಕಿನಿಲ್ಲಿಸಿದ ನೋಟಕರಂತೆ' ಇದ್ದರು.

ಮೀನಾಳ ಸೋದರ ಮರ್ಚೆಂಟ್‌ನೇವಿಯಲ್ಲಿದ್ದು ಈಗ ಎರಡು ವರ್ಷದಿಂದ ದೇಶದ ಹೊರಗೆ ಇದ್ದ. ಗತಿಸಿದ ಮೀನಾಳ ಅಕ್ಕನ ಮಗ ಇದೀಗ ಹದಿನೆಂಟು ವರ್ಷದ ಯುವಕನಾಗಿದ್ದ. ಕಳೆದ ಎರಡು ವರ್ಷಗಳಿಂದ ದೂರದ ಪಟ್ಟಣದಲ್ಲಿ ಕಾಲೇಜಿನಲ್ಲಿ ಓದುತ್ತಿದ್ದು ಹಾಸ್ಟೆಲ್‌ನಲ್ಲಿ ಇರುತ್ತಿದ್ದ. ಇನ್ನು ಮನೆಯ ಕೊಠಡಿಗಳು ಯಾವು ತೆರೆದಿದ್ದುವೋ ಯಾವು ಮುಚ್ಚಿದ್ದುವೋ! ಅವು ಮೀನಾಳನ್ನು ನೋಡಿ ತ್ರಾಹಿತ್ರಾಹಿ ಎನ್ನತೊಡಗಿದವು.

ವೃದ್ಧ ತಂದೆಯ ಕಣ್ಣುಗಳಲ್ಲಿ ಇನ್ನೂ ಹೆಚ್ಚಿನದನ್ನು ನೋಡುವ ಶಕ್ತಿ ಕಮ್ಮಿಯಾಯಿತೇನೋ, ಕಣ್ಣುಗಳಿಗೆ ಪೊರೆ ಬಂದಿತು.

ಸರ್ಕಾರಿ ಮುದ್ರೆಗಳನ್ನು ಒತ್ತಿಸಿಕೊಂಡ ಪತ್ರವೊಂದು ಹಿಂದೊಂದು ದಿನ ಮೀನಾಳ ಶವದ ಬಟ್ಟೆಯ ಹಾಗೆ ಬಂದಿತ್ತಲ್ಲ ಅಂಥವೇ ಪತ್ರ ಮತ್ತೊಮ್ಮೆ, ಮಗುದೊಮ್ಮೆ ಬಂದಿತು. ಮನೆಯ ಮೇಲೆ ಕೆಲವೊಂದು ಹೂವುಗಳು ಮೂಡಿ ಬರುವಂತೆ ಅವು ಬಂದುವು. ಸರ್ಕಾರ ಯುದ್ಧದಲ್ಲಿ ಮಡಿದ ಯೋಧರ ವಿಧವೆಯರಿಗೆ ನೆರವು ನೀಡಲು ಬಯಸುತ್ತದೆ. ಅದಕ್ಕಾಗಿ ಅವರಿಗೆ ಮನೆಕಟ್ಟಿಕೊಳ್ಳಲು ಜಮೀನು ಕೊಡುತ್ತದೆ, ಅದರ ಜೊತೆಗೆ ಉದ್ಯೋಗವನ್ನು ನೀಡುತ್ತದೆ ಎಂದು ಅದರಲ್ಲಿ ಬರೆದಿತ್ತು. ಉದ್ಯೋಗ ನೀಡುವ ಸಂಬಂಧದಲ್ಲಿ ಸರ್ಕಾರವು ಅವರ ಇಚ್ಛೆಯನ್ನು ಕೇಳಿತ್ತು–ಸಣ್ಣ ಕೈಗಾರಿಕೆ ನಡೆಸುವುದಿದ್ದರೆ ಬೇಕಾದರೆ ಹಣ ತೆಗೆದುಕೊಳ್ಳಬಹುದು, ಅದು ಬೇಡ ಎಂದರೆ ಸೈನಿಕ ಶಾಲೆಗಳಲ್ಲಿ ನೌಕರಿ ಪಡೆದುಕೊಳ್ಳಬಹುದು ಎಂದು.

ಆದರೆ ಚಟ್ಟದ ಮೇಲಿನ ಹೂಗಳಂತಿದ್ದ, ಸರ್ಕಾರಿ ಮುದ್ರೆಗಳನ್ನು ಒತ್ತಿಸಿಕೊಂಡ ಈ ಪತ್ರಗಳನ್ನು ಮೀನಾ ಕೈಗೆ ತೆಗೆದುಕೊಂಡು ಹೊಸಕಿ ಹಾಕಿದಳು. ಅವಳ ಅಂತರ್ಯದ

ಮೀನಾಳ ಕೊರಳನ್ನು ಅಪ್ಪಿ ಹಿಡಿದುವು. ಮೀನಾಳಿಗಿಂತ ಸರಿಯಾಗಿ ನಾಲ್ಕು ಅಂಗುಲ ಎತ್ತರಕ್ಕೆ ಬೆಳೆದು ನಿಂತಿದ್ದ ಅವಿನಾಶ್ ಕತ್ತಲೆಯ ಮೋಡಿಯಲ್ಲಿ ಅವಳಿಗೆ ತನ್ನ 'ಚೆಲುವ ಯೋಧನ' ಹಾಗೆ ಕಾಣಿಸುತ್ತಿದ್ದರೆ, ಬೆಳಕಿನ ಮೋಡಿಯಲ್ಲಿ ಅದೇ ಅವಿನಾಶ್, ಚಿಕ್ಕ...... ಮಡಿಲಲ್ಲಿಟ್ಟುಕೊಂಡು ತಾನು ಉಣಬಡಿಸುತ್ತಿದ್ದ ಎರಡೂವರೆ ಮೂರು ತಿಂಗಳಿನ ಮಗುವಿನ ಹಾಗೆ ಕಾಣಿಸುತ್ತಿದ್ದ.

ಗಂಡಸತ್ತನೆಂದರೆ ಹೆಣ್ಣಿನ ಎಲ್ಲ ಅಂಗಗಳೂ ಜೀವಂತವಾಗಿದ್ದರೂ ಅವಳ ಗರ್ಭವಂತೂ ಖಂಡಿತ ಸಾಯುತ್ತದೆ. ಮೀನಾಳಿಗಂತೂ ತನ್ನ ಸತ್ತ ಗರ್ಭದ ದುರ್ನಾತ ಮೂಗಿಗೆ ಅಡರಿದಂತೆನಿಸುತ್ತಿತ್ತು.

ಒಂದು ವೇಳೆ ತನ್ನ ಚೆಲುವ ಯೋಧನನ್ನು ಗರ್ಭದಲ್ಲಿ ಧರಿಸಿದ್ದಿದ್ದರೆ ಅವನ ಒಂದು ಅಂಶ ಈ ಪ್ರಪಂಚದಲ್ಲಿ ಬದುಕಿರುತ್ತಿತ್ತು ಎಂಬ ಆಸೆಮೊಳೆದೋರಿತು. ಕಳೆದು ಹೋದ ಕ್ಷಣ ಮೀನಾಳ ಶರೀರದಲ್ಲಿ ಗಾನ ಮೊಳಗಿಸತೊಡಗಿತು.

ಬೆಳಕು ಮತ್ತು ಕತ್ತಲೆಗಳೆರಡೂ ಒಂದು ಮತ್ತೊಂದನ್ನು ಸಂಧಿಸುವ ಸಮಯವೊಂದಿತ್ತು. ಮೀನಾ ತನ್ನ ಕೊಠಡಿಯಲ್ಲಿ ಮಂಚದ ಮೇಲೆ ಮಲಗಿಕೊಂಡು ಅವಿನಾಶನ ಮುಖದ ಕಡೆ ಒಂದೇ ಸಮನೆ ನೋಡತೊಡಗಿದಳು.

ಆ ಗಳಿಗೆಯಲ್ಲಿ ಅವಿನಾಶನ ಮುಖದ ಚಹರೆಯಲ್ಲಿ ಎರಡು ಚಹರೆಗಳು ಬೆರೆತಿದ್ದುವು. ಒಂದು ಮೀನಾಳ ಪತಿಯ ಚಹರೆಯಾದರೆ ಇನ್ನೊಂದು ಆ ಪತಿಯಿಂದ ಹುಟ್ಟಬಹುದಾದ ಮಗುವಿನದು. ಒಬ್ಬ ಈ ಜಗತ್ತಿನಲ್ಲಿ ಈಗ ಬದುಕುಳಿದಿಲ್ಲ ಮತ್ತು ಇನ್ನೊಬ್ಬ ಈ ಜಗತ್ತಿಗೆ ಬರುವಂತಿಲ್ಲ ಎಂಬುದು ಮೀನಾಳಿಗೆ ಗೊತ್ತಿತ್ತು. ಆದರೆ ಈ ಎರಡು ಚಹರೆಗಳು ತನ್ನ ಕಣ್ಮುಂದೆ ನೆರಳಿನ ಹಾಗೆ ಏಕೆ ಸುಳಿದಾಡುತ್ತಿವೆ ಎಂದು. ಮೀನಾ ವಿಸ್ಮಯದಿಂದ ನೋಡುತ್ತಿದ್ದಳು.

ಒಂದು ಜಾಗೃತಾವಸ್ಥೆ : ಎದುರಿನಲ್ಲಿ ಯಾವ ನೆರಳೂ ಇಲ್ಲ. ಒಂದು ಏರು ಜವ್ವನದ ಈಗಿನ ಅವಿನಾಶನ ಚಹರೆ ಇನ್ನೊಂದು ಮುಗ್ಧ ಬಾಲಕ ಅವಿನಾಶನ ನೆನಪು.... ಅದರೊಂದಿಗೆ ಮೀನಾಳ ಹದಿನೆಂಟು ವರ್ಷಗಳ ನಂಟು......

ಇನ್ನೊಂದು ಅಚೇತನಾವಸ್ಥೆ ಅಥವಾ ಸುಪ್ತಾವಸ್ಥೆ. ಎದುರುಗಡೆ ಏನು ಕಾಣುತ್ತಾ ಇದೆ ಅದು ಕೇವಲ ಒಬ್ಬ ಗಂಡು ಮತ್ತು ತಾನು ಕೇವಲ ಒಬ್ಬ ಹೆಣ್ಣು : ಆ ಹೆಣ್ಣಿನ ಗರ್ಭವಾದರೋ ಗಂಡನ್ನು, ಅವನ ಶಾಶ್ವತ ಅಸ್ತಿತ್ವವನ್ನು ಚೀರಿ ಬೇಡುತ್ತಿದೆ.

ಬೆಳಕು ಮತ್ತು ಕತ್ತಲೆಗಳು ಒಂದರೊಡನೊಂದು ಮಿಳಿತವಾಗುತ್ತಿದ್ದಂತೆ ಮೀನಾಳ ಮನಸ್ಸಿನ ಎರಡೂ ಅವಸ್ಥೆಗಳೂ ಒಂದು ಇನ್ನೊಂದರಲ್ಲಿ ಸೇರಿ ಹೋದವು ಮತ್ತು ಅವಳು ಅಂದರೆ ಒಂದು ಹೆಣ್ಣಿನ- ಎರಡೂ ಬಾಹುಗಳು ಮುಂದಕ್ಕೆ ಚಾಚಿ ಒಬ್ಬ ಗಂಡಿನ ಎರಡೂ ಬಾಹುಗಳನ್ನು ಹಿಡಿದು ಕೊಂಡುಬಿಟ್ಟಾಗ ಮಾಂಸಕ್ಕೆ ಮಾಂಸದ ತೀವ್ರವಾಸನೆ

ತಾಕಿತು.

ಒಂದು ಹೆಣ್ಣಿನ ಬಟ್ಟೆಗಳು ಮತ್ತು ಒಂದು ಗಂಡಿನ ಬಟ್ಟೆಗಳು ಹಾರಾಡುತ್ತ ಮಂಚದ ಕೆಳಗೆ ಬಿದ್ದು ಬಿಟ್ಟವು ಮತ್ತು ಮಂಚದ ಕಾಲುಗಳ ಹತ್ತಿರ ತಲೆ ತಗ್ಗಿಸಿ ಗಂಟಿನ ಹಾಗೆ ಕೂತುಬಿಟ್ಟವು.

ಇದು ಆತ್ಮವು ಆತ್ಮವನ್ನು ಸ್ಪರ್ಶಿಸಿದಂಥ ಶಾಂತ ಕ್ಷಣವಲ್ಲ. ಬದಲಿಗೆ ಒಂದು ಹೆಣ್ಣು ತನ್ನ ಮನಸ್ಸಿನ ಸಂಸ್ಕಾರಗಳ ಮೇಲೆ ಹೆಜ್ಜೆ ಇಟ್ಟು ಅಲಭ್ಯವಾದ್ದನ್ನು ಹುಡುಕುತ್ತಿರುವಂಥ ಹಾಗೂ ಒಂದು ಗಂಡು ಬಹಳ ಗಾಬರಿಕೊಂಡು ತನ್ನ ವಯಸ್ಸಿಗಿಂತಲೂ ಬಹಳ ದೊಡ್ಡವನಾಗಿಬಿಟ್ಟಂಥ ಪ್ರಳಯದ ಒಂದು ಕ್ಷಣ.

ಪ್ರಳಯದ ಆ ಕ್ಷಣ ಕಳೆದು ಹೋಯಿತು. ಮೀನಾ ಒಂದು ಹೊಸ ಸಾವನ್ನು ಸತ್ತಳು..... ಮೀನಾ ಅಷ್ಟೇ ಅಲ್ಲ ಮೀನೂ ಕೂಡಾ......

ಇಡೀ ರಾತ್ರಿ ಮಂಚದ ಮೇಲೆ ಇಬ್ಬರು ಹೆಣ್ಣುಗಳು ಇದ್ದಂತೆ. ಒಬ್ಬರು ಇನ್ನೊಬ್ಬರ ಮೇಲೆ ಆರೋಪ ಮಾಡುತ್ತ ಒಬ್ಬರು ಇನ್ನೊಬ್ಬರನ್ನು ಕೊಂದು ಹಾಕಿದರು.

ಆಮೇಲೆ ಅಂದು ಬೆಳಗ್ಗೆ ಕೋಣೆಯಿಂದ ಹೊರ ಹೊರಟ ಹೆಣ್ಣು ಅವಳು ಒಬ್ಬ ಮೂರನೇ ಹೆಣ್ಣಾಗಿದ್ದಳು. ಅಸ್ತವ್ಯಸ್ತವಾಗಿ ಚೆದುರಿಬಿದ್ದಿದ್ದ ಸರ್ಕಾರಿ ಕಾಗದಪತ್ರಗಳ ಮೇಲೆ ಲಗುಬಗೆಯಿಂದ ಸಹಿಹಾಕಿದಳು. ಮತ್ತು ತಾನು ಯಾವುದಾದರೂ ದೂರದ ಗುಡ್ಡಗಾಡು ಪ್ರದೇಶದ ಸ್ಕೂಲ್‌ನಲ್ಲಿ ಕೆಲಸ ಮಾಡಲು ಇಚ್ಛಿಸುತ್ತಿರುವುದಾಗಿ ಬರೆದು ಹಾಕಿದಳು.

ಕೆಲವು ದಿನಗಳ ನಂತರ ಒಂದು ಘಟನೆಯು ಕಾರಣವಾಗಿ ತೆರೆಯಲ್ಪಟ್ಟಿದ್ದ ಆ ಮನೆಯ ಒಂದು ಬಾಗಿಲನ್ನು ಇನ್ನೊಂದು ಘಟನೆಯು ಮತ್ತೆ ಮುಚ್ಚಿಬಿಟ್ಟಿತು. ಮೀನಾ ದೂರದ ಗುಡ್ಡಗಾಡು ಪ್ರದೇಶದ ಸ್ಕೂಲ್‌ಗೆ ಕೆಲಸಕ್ಕೆ ಹೋಗಿಬಿಟ್ಟಳು. ಬಹುಶಃ ಶಾಶ್ವತವಾಗಿ.





# ಜಾಗತೀಕರಣ ಮತ್ತು ಮಹಿಳಾ ಚಿಂತನೆ

– ಡಾ. ಕೆ.ಬಿ. ಸರಸ್ವತಿ

ನಾನು ದಕ್ಷಿಣದವಳು. ಪೂರ್ವ ದೇಶದವಳು ಮತ್ತು ಪೌರಾತ್ಯ ಪರಂಪರೆಯವಳು ಹಾಗೂ ಹೆಣ್ಣು. ಆದ್ದರಿಂದ ನಾನು ಸ್ವತಂತ್ರಳು. ನನಗೆ ಅವಕಾಶಗಳು ಮುಕ್ತವಾಗಿವೆ. ಜಾಗತೀಕರಣವನ್ನು ನಾನು ನೋಡುವ ಕ್ರಮವೂ ಭಿನ್ನವಾದುದಾಗಿದೆ.

ಜಾಗತೀಕರಣವೆಂಬುದು ಒಂದು ಮುದ್ದಾದ ಮಾಯೆ. ಮುದ್ದಾಡುವವರ ಸಂಖ್ಯೆ ದೊಡ್ಡದಿದೆ. ಈ ಮಾಯೆಯನ್ನು ಎದುರಾಗುತ್ತಿರುವ ನಾನು 'ಕೇಳುವ' ಪರಂಪರೆಯವಳು. ಕೇಳುವ, ಕೇಳಿಸಿಕೊಳ್ಳುವ ಪ್ರಕ್ರಿಯೆಯೇ ಆಹ್ಲಾದಕರವಾದುದು. ನಾನಿಲ್ಲೇನೂ ಹೇಳುತ್ತಿಲ್ಲ. ಜಾಗತೀಕರಣದ ಅಬ್ಬರವನ್ನಷ್ಟೇ ಕೇಳಿಸಿಕೊಳ್ಳುತ್ತಿದ್ದೇನೆ. ನನ್ನೊಂದಿಗೆ ನೀವು ಕೂಡ. ಜಾಗತೀಕರಣವು ಒಂದು ವ್ಯವಸ್ಥಿತವಾದ ವಿಸ್ಮೃತಿ ಅಥವಾ ಅರಿವಳಿಕೆ. ಅಧಿಕಾರ ಕೇಂದ್ರಗಳ ಸ್ಥಾಪನೆ ಮತ್ತು ಅದರ ಭಾಗವಾದ ಮಾರುಕಟ್ಟೆ ಆರ್ಥಿಕತೆ ಇದರ ಬುನಾದಿ. ಇವೆರಡರ ಬಗೆಗೆ ನನ್ನ ಪ್ರತಿಕ್ರಿಯೆ ಏನು? ಕೇಳುವ ಪರಂಪರೆಯವಳಾದ ನನಗೆ ಜಾಗತೀಕರಣವೆಂಬ ಅಸಂಗತವನ್ನು ಎತ್ತಿ ಆಡಬೇಕಾದ ಒತ್ತಡವಿಲ್ಲ. ಏಕೆಂದರೆ ಅದರ ದೌರ್ಬಲ್ಯ ಮತ್ತು ನಾಶದ ಬೀಜ ಅದರೊಟ್ಟಿಗೇ ಇವೆ.

ಈ ಅಧ್ಯಯನದಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಜಾಗತೀಕರಣವು ಮಹಿಳೆಯನ್ನೊಳಗೊಂಡಂತೆ ಎಲ್ಲ ಸಾಂಸ್ಕೃತಿಕ, ಆರ್ಥಿಕ ರೂಪಗಳಿಗೆ ನೀಡುವ ವ್ಯಾಖ್ಯಾನ/ಅಪವ್ಯಾಖ್ಯಾನಗಳ ವಿವರಣೆ ಇದೆ. ಎರಡನೆಯ ಭಾಗದಲ್ಲಿ ಸ್ವಾಯತ್ತ ಮಹಿಳಾ ಅಭಿವ್ಯಕ್ತಿ ನೆಲೆಗಳು ಜಾಗತೀಕರಣಕ್ಕೆ ಪ್ರತಿಕ್ರಿಯಿಸಿದ ಅನ್ವಯದ ಭಾಗಗಳಿವೆ. ಜಾಗತೀಕರಣದ ಪರಿಧಿಯನ್ನು ಕುರಿತಾದ ಅನೇಕ ವ್ಯಾಖ್ಯಾನಗಳಿವೆ. ಪ್ರಸ್ತುತ ಅಧ್ಯಯನವು ಜಾಗತೀಕರಣವನ್ನು, ನಿರ್ದಿಷ್ಟ ಸ್ಥಳೀಯ ಸಮೂಹಗಳ ಜೀವನೋಪಾಯ ವ್ಯವಸ್ಥೆಯನ್ನು ಮರುರೂಪಗೊಳಿಸುವ ಅನ್ಯ ಪ್ರವೇಶಗಳೆಂದು ವಿವರಿಸಿಕೊಳ್ಳುತ್ತದೆ. ಅನ್ಯ ಪ್ರವೇಶಗಳು ಸಮೂಹದ ಜೀವನಶೈಲಿ, ಭಾಷೆ, ಸಾಮಾಜಿಕ ವ್ಯವಸ್ಥೆ, ಲಿಂಗಾಧಾರಿತ ಬದುಕು, ಜ್ಞಾನ ಶಿಸ್ತುಗಳು, ಆಹಾರೋತ್ಪಾದನೆ ಮುಂತಾದ ಬದುಕಿನ ಎಲ್ಲ ಆಯಾಮಗಳನ್ನೂ ತನ್ನ ಉದ್ದೇಶಿತ ಆರ್ಥಿಕ ಗತಿಗೆ ಅನುಗುಣವಾಗಿ ಹೊಂದಿಕೊಳ್ಳುವಂತೆ ಮಾಡುತ್ತದೆ. ಈ ರೀತಿಯಲ್ಲಿ ಏಕಾಯತನದ ಅಧಿಕಾರವಿದೆ. ಅಂದರೆ ತನ್ನ ಈ ವರ್ತನೆ ತನಗಾಗಿ ಅಲ್ಲ ಬದಲಿಗೆ ಈ ಸಮೂಹಗಳ ಅಭಿವೃದ್ಧಿಗೆ ಎಂದು ಅದು ಬಿಂಬಿಸುತ್ತದೆ. ಇದನ್ನು ತಾನು ಹೊತ್ತುಕೊಳ್ಳುತ್ತಿರುವ ಜವಾಬ್ದಾರಿ ಎಂದುಕೊಳ್ಳುತ್ತದೆ. ವಿಶ್ವದ ನಾನಾ ಸಮೂಹಗಳು ತಮ್ಮ ಅಸ್ಮಿತೆಗಳನ್ನು ಕಾಪಾಡಿಕೊಳ್ಳಲು ತಮ್ಮ ಜೀವನ ಮೀಮಾಂಸೆಯ ಅನೇಕ ಆಯಾಮಗಳನ್ನು ಎಚ್ಚರದಿಂದ ರೂಪಿಸಿಕೊಂಡಿರುತ್ತವೆ. ಉದಾಹರಣೆಗೆ ಸಮೂಹವೊಂದು ಸ್ವತಂತ್ರವಾಗಿ ಸ್ವಾವಲಂಬಿಯಾಗಿ ಬಾಳಲು ಅಗತ್ಯವಾದ ಸಾವಯವ ಸಂಬಂಧದ ವ್ಯವಸ್ಥೆಯನ್ನು ರೂಪಿಸಿಕೊಂಡಿರುತ್ತದೆ. ತಮ್ಮ ಆಹಾರ ಪದ್ಧತಿ, ಕೃಷಿಪದ್ಧತಿ, ಆರೋಗ್ಯಪದ್ಧತಿ, ನೀರು, ನೆಲ, ಜೈವಿಕಾವರಣಗಳನ್ನು ಜತನದಿಂದ ಕಾಪಾಡಿಕೊಳ್ಳುತ್ತವೆ. ತನ್ನ ಸುತ್ತಲಿನ ಸಮಸ್ತ ಜೀವಕೋಟಿಗೆ ಸಮಾನವಾಗಿ ಬದುಕುವ ಅವಕಾಶಕ್ಕೆ ಭಂಗ ಬಾರದಂತೆ ಬದುಕುವ ಜವಾಬ್ದಾರಿಯುತ ಮತ್ತು ಎಚ್ಚರದ ಜೀವನ ಶೈಲಿಯನ್ನು ಕಟ್ಟಿಕೊಳ್ಳುತ್ತವೆ.

ಜಾಗತೀಕರಣವು ಸ್ವಾಯತ್ತ ನೆಲೆಗಳನ್ನು ಅಧಿಕಾರ ಕೇಂದ್ರಗಳ ಅಡಿಯಾಳನ್ನಾಗಿಸುವ ಸಾಧಕವಾಗುತ್ತದೆ. ಪ್ರಚಲಿತದಲ್ಲಿರುವ ಸಬಲೀಕರಣ ಉದ್ದೇಶದ ಸ್ತ್ರೀವಾದಿ ಹೋರಾಟಗಳು ಅಧಿಕಾರ ಕೇಂದ್ರಗಳೊಡನೆ ಪಾಲಿಗಾಗಿ ನಡೆಸುವ ಹೋರಾಟಗಳಾಗಿರುವುದರಿಂದ, ಅವು ಅನಿವಾರ್ಯವಾಗಿ ತಮ್ಮ ಸ್ವಾಯತ್ತನೆಲೆಗಳನ್ನು ಕಡೆಗಣಿಸಿ ಅಧಿಕಾರ ಕೇಂದ್ರಗಳನ್ನು ಮಾನ್ಯಮಾಡುತ್ತವೆ. ಇದು ವೈರಿ ಬಿಚ್ಚಿದ ಬಲೆಯನ್ನು ತಾವಾಗಿ ಅಪ್ಪಿಕೊಂಡಂತಾಗುತ್ತದೆ. ಇಂತಹ ಹೋರಾಟಗಳು ಇನ್ನಷ್ಟು ಮತ್ತಷ್ಟು ಸವಲತ್ತುಗಳಿಗಾಗಿ, ಅಧಿಕಾರಕ್ಕಾಗಿ ನಡೆಸುವ ಚೌಕಾಸಿಗೆ ಇಳಿಯಬೇಕಾಗುತ್ತದೆ. ಇಂತಹ ಹೋರಾಟಗಳನ್ನು ನಿರಾಕರಿಸಬೇಕೆಂದೇನೂ ಅಲ್ಲ. ಆದರೆ ಅವು ಅಂತಿಮವಾಗಿ ತಾತ್ಕಾಲಿಕ ಪರಿಣಾಮಗಳಲ್ಲಿ ತೃಪ್ತಿ ಹೊಂದಿ ಸ್ಥಗಿತವಾಗುತ್ತವೆ. ಆದರೆ

ಸ್ವಾಯತ್ತ ನೆಲೆಯ ಚಿಂತನೆಗಳಿಗೆ ಮುಖ್ಯವಾಗುವುದು ಅಧಿಕಾರದ ಮರು ಹಂಚಿಕೆಯೂ ಅಲ್ಲ, ಹೆಚ್ಚಿನ ಪಾಲೂ ಅಲ್ಲ, ಬದಲಿಗೆ ಎಲ್ಲ ರೀತಿಯ ಅಧಿಕಾರ ನಿರಸನವು ಇಲ್ಲಿನ ಪ್ರಮುಖ ನಿಲುವು.  ಈ ನಿಲುವು ಹೆಣ್ಣಿನ ಸ್ವಾಯತ್ತ ನೆಲೆಗಳನ್ನು ಭದ್ರಗೊಳಿಸುವ ಬಗೆಯನ್ನು ಈ ಅಧ್ಯಯನ ವಿವರವಾಗಿ ಪರಿಶೀಲಿಸುತ್ತದೆ.  ಇದೊಂದು ಭಿನ್ನ ರೀತಿಯ, ಭಿನ್ನ ದಿಕ್ಕಿನ ಪಯಣ. ನಮ್ಮ ಸಾಮಾಜಿಕ. ಸಾಂಸ್ಕೃತಿಕ ಹೋರಾಟಗಳು ಹಿಡಿದ ಅಧಿಕಾರ ಮುಖೀ ದಿಕ್ಕಿನ ಪಯಣಗಳು ತಲುಪಿರುವ ಗುರಿಗಳು ನಮ್ಮ ಉದ್ದೇಶವನ್ನು ಎಷ್ಟರ ಮಟ್ಟಿಗೆ ಈಡೇರಿಸಿವೆ ಎಂಬುದು ಸ್ಪಷ್ಟವಾಗಬೇಕಿದೆ.

ಒಂದೆರಡು ಸ್ವಾಯತ್ತ ನೆಲೆಗಳನ್ನು ಉದಾಹರಿಸುವುದಾದರೆ, ಭೂಮಿಯ ಧಾರಣಾ ಶಕ್ತಿ, ಬಹುಮುಖಿ ಜೀವನಪದ್ಧತಿಗಳು, ಸ್ಥಳೀಯ ಸಂಪನ್ಮೂಲಗಳನ್ನು ಬಳಸಿ ಬದುಕಿನ ಮಾದರಿಗಳನ್ನು ಕಟ್ಟಿಕೊಳ್ಳುವ ಕರ್ತೃತ್ವಶಕ್ತಿ, ಮುಂತಾದುವು. ಅನ್ಯ ಪ್ರವೇಶದಿಂದ ಇವುಗಳು ನಾಶವಾಗದಂತೆ, ದುರ್ಬಲವಾಗದಂತೆ ನೋಡಿಕೊಂಡರೆ ಸಾಕು. ಇಂತಹ ಸ್ವತಂತ್ರ ಜೀವನ ಅಭಿವ್ಯಕ್ತಿಯನ್ನು ಭ್ರಷ್ಟಗೊಳಿಸುತ್ತಿರುವ ಜಾಗತೀಕರಣದ ಹತಾರುಗಳು ಯಾವುವೆಂದರೆ: ೧) ಭಾಷೆ ೨) ಸಂಕೇತಗಳು ೩)ಮಾರುಕಟ್ಟೆ ೪) ಲೋಕಸಮಸ್ತವನ್ನು ಭಿನ್ನ ಭಿನ್ನ ಘಟಕಗಳನ್ನಾಗಿಸಿ ವಿಂಗಡಿಸಿ ಮಾರುಕಟ್ಟೆಯ ಸರಕನ್ನಾಗಿಸುವುದು. ೫) ಪ್ರಮಾಣೀಕರಣ ೬) ಸ್ಥಳೀಯ ಭೂಗೋಳದ ನಿರಾಕರಣೆ. ಈ ಪರಿಕಲ್ಪನೆಗಳು ಈಗಾಗಲೇ ಅನೇಕ ಕಡೆ ಚರ್ಚಿತವಾಗಿರಬಹುದು. ಆದರೆ ಇವುಗಳ ಮರುವ್ಯಾಖ್ಯಾನವು ಹೊಸ ಚಿಂತನೆಗಳಿಗೆ ಚಾಲನೆ ನೀಡಲು ಸಾಧ್ಯವಿದೆ.  ಪ್ರಸ್ತುತ ಸಂದರ್ಭದಲ್ಲಿ ಮಹಿಳಾ ಚಿಂತನೆಯ ಸ್ವರೂಪ ಮತ್ತು ಮುಂದಿನ ಹಾದಿಯ ನಿರ್ಧಾರಣೆಗೆ ಇದು ಅಗತ್ಯವಿದೆ.

ಜ್ಞಾನ ಪ್ರಸರಣ ಮತ್ತು ತಿಳುವಳಿಕೆಯ ವೃದ್ಧಿ (ವಿಜ್ಞಾನ ಮತ್ತು ತಂತ್ರಜ್ಞಾನವನ್ನೂ ಒಳಗೊಂಡಂತೆ) ಹಾಗೂ ರಾಷ್ಟ್ರ ರಾಷ್ಟ್ರಗಳ ನಡುವಿನ ಕೊಳು ಕೊಡುಗೆಗಳೇನೂ ಹೊಸತಲ್ಲ. ವ್ಯಾಪಾರ. ಪ್ರವಾಸ. ವಲಸೆಗಳು ನಾಗರೀಕತೆಯ ಆದಿಯಿಂದಲೂ ಜೀವಂತಿಕೆಯ ಲಕ್ಷಣಗಳಾಗಿ ಮುಂದುವರಿದಿವೆ. ಇಪ್ಪತ್ತನೆಯ ಶತಮಾನವು ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ಗಮನಾರ್ಹವಾದ ಸಾಧನೆಯನ್ನು ಮಾಡಿದೆ.  ಭೂಮಿಯನ್ನು ಸಂಕುಚಿತಗೊಳಿಸಿದ್ದೇವೆ.  ಖಂಡಗಳನ್ನು ಕೆಲವೇ ಗಂಟೆಗಳಷ್ಟು ಹತ್ತಿರ ತಂದಿದ್ದೇವೆ.  ವಿಚಾರಗಳನ್ನು ಕೆಲವೇ ತೃಣ ಸೆಕೆಂಡುಗಳಿಗೆ ಕುಗ್ಗಿಸಿದ್ದೇವೆ.  ಅಗಣಿತ ಸಂಪತ್ತನ್ನು 'ಉತ್ಪಾದಿಸಿದ್ದೇವೆ'. ನಮ್ಮ ಮಾರುಕಟ್ಟೆಗಳನ್ನು ಕಲ್ಪಿಸಲೂ ಆಗದ ಭೋಗವಸ್ತುಗಳಿಂದ ಸಿಂಗರಿಸಿದ್ದೇವೆ.  ಎಲ್ಲ ರಾಷ್ಟ್ರಗಳೂ ಹೆಚ್ಚುಕಡಿಮೆ 'ಪ್ರಜಾಪ್ರಭುತ್ವ'ವನ್ನು ತಮ್ಮದಾಗಿಸಿಕೊಂಡಿವೆ. ಮಾನವ ಹಕ್ಕುಗಳ ಸಂರಕ್ಷರೆಂದು ಘೋಷಿಸಿಕೊಂಡಿವೆ.

ಧರ್ಮವನ್ನು ನಿರ್ಧರಿಸುತ್ತವೆ. ರಾಷ್ಟ್ರ ರಾಜ್ಯದ ಪ್ರಜೆಯಾಗಬಲ್ಲ ವ್ಯಕ್ತಿಯು ತನ್ನನ್ನು ತಾನು ಅಂತಹ ಸಾಮಾಜಿಕ ವಾತಾವರಣದಲ್ಲಿ ಅರ್ಥಪೂರ್ಣ ಚೇತನವಾಗಿಸಿಕೊಳ್ಳಲು ಹಾತೊರೆಯುತ್ತಾನೆ. ಈ ಅರ್ಥ್ಯಸುಪಿಕೆಯು ಮುಖ್ಯವಾಗಿ ಭಾಷೆ ಮತ್ತು ಜ್ಞಾನ ನಿರ್ಮಾಣ ಕೇಂದ್ರಗಳ ಮೂಲಕವೇ ಸಾಧ್ಯವಾಗುತ್ತದೆ. ಭಾಷೆಯನ್ನು ಜ್ಞಾನದ ಏಕೈಕ ಮಾರ್ಗವನ್ನಾಗಿ ಶೈಕ್ಷಣಿಕ ಸಂಸ್ಥೆಗಳು ಅಧಿಕೃತಗೊಳಿಸಿವೆ. ಅದಕ್ಕೆ ಅನುಗುಣವಾಗಿ ಜ್ಞಾನ ಕೇಂದ್ರಗಳು ಭಾಷೆಯ ಮೂಲಕ ಮೂರ್ತಗೊಳ್ಳುತ್ತವೆ. ಅಮೂರ್ತವಾದ ಭಾಷೆಯ ಮಿತಿಗೆ, ಯಾವುದೇ ಸಾಂಸ್ಥಿಕ ಯಜಮಾನಿಕೆಗೆ ಸಹಕಾರ ನೀಡದ ಸ್ತ್ರೀ ಸ್ವಾಯತ್ತತೆಯು ಮೂಕವಾಗಿಬಿಡುತ್ತದೆ. ದೇಹವನ್ನು ಅದರ ಕರ್ತೃತ್ವ ಶಕ್ತಿಯನ್ನು ಸಂಭ್ರಮದಿಂದ ಭಾವಿಸುವ ಸ್ತ್ರೀ ಸ್ವಾಯತ್ತತೆಯು ಹೆಣ್ಣಿನ ದೇಹವು ಕೇವಲ ಮಾರುಕಟ್ಟೆಯ ಸರಕಾಗುವುದನ್ನು ಯಾವ ಕಾಲದಿಂದಲೂ ಪ್ರತಿಭಟಿಸುತ್ತಲೇ ಬಂದಿದೆ. ಆದರೆ ಅಕ್ಷರಗಳಲ್ಲಲ್ಲ; ಬದಲಿಗೆ ರೂಪಕಗಳಲ್ಲಿ, ಆಚರಣೆಗಳಲ್ಲಿ. ಈ ಮೂಕ ಸಮೂಹಗಳು ಮಾರುಕಟ್ಟೆಯ ವಹಿವಾಟಿಗನುಗುಣವಾಗಿ ಸ್ವೀಕಾರಕ್ಕೋ. ತಿರಸ್ಕಾರಕ್ಕೋ ಈಡಾಗುತ್ತವೆ. ತನ್ಮೂಲಕ ಸರಕೀಕರಣದ ಪ್ರಕ್ರಿಯೆಗೆ ಒಳಪಡುತ್ತವೆ. ಈ ವಸ್ತುವಾಗುವ ಪ್ರಕ್ರಿಯೆಯೆಂದರೆ ಸ್ವಾಯತ್ತತೆಯ ನಾಶ. ಇದು ಎಚ್ಚರದಿಂದ ದಾಖಲಿಸಬೇಕಾದ ಸಂಗತಿ. ಏಕೆಂದರೆ ಇಂತಹ ನಿರ್ವಚನಗಳು ಮಹಿಳಾ ಸಂಕುಲವನ್ನು ಜಾಗತೀಕರಣದ ಪ್ರಕ್ರಿಯೆಯಿಂದ, ಅಭಿವೃದ್ಧಿಯ ಮುಖ್ಯ ವಾಹಿನಿಯಿಂದ ದೂರ ಸರಿಸುತ್ತಿರುವ ಪ್ರಯತ್ನಗಳೆಂಬಂತೆ ಸರಳೀಕರಣಗೊಂಡುಬಿಡುವ ಅಪಾಯಗಳಿವೆ. ಇದನ್ನು ಮತ್ತೂ ಸ್ಪಷ್ಟಗೊಳಿಸಲು ' ಅಭಿವೃದ್ಧಿ ' ಹೆಸರಿನ ಆಶಾ ಗೋಪುರವು ಹೇಗೆ ನಮ್ಮ ಹಾದಿ ತಪ್ಪಿಸುತ್ತಿದೆ ಎಂದು ಅರಿತುಕೊಳ್ಳಬೇಕು.

ಜಾಗತೀಕರಣದ ಸಂದರ್ಭದಲ್ಲಿ ಬಡತನವು ಸ್ತ್ರೀ ಮುಖೇನ ಪ್ರತಿನಿಧಿಸಲ್ಪಡುತ್ತದೆ. ಈ ನಿರ್ಲಕ್ಷಿತ ಸಮೂಹಗಳೆಲ್ಲವೂ ಜಾಗತೀಕರಣದ ವ್ಯಾಖ್ಯೆಯಲ್ಲಿ 'ಅನ್ಯರು', 'ಕೊರತೆಯಿರುವವರು' ಮತ್ತು 'ಅವಕಾಶವಂಚಿತರು'. ಪರಿಧಿಗೆ ತಳ್ಳಲ್ಪಟ್ಟಿರುವ ಇವರೆಲ್ಲರು ಪ್ರಶ್ನಿಸುತ್ತಿರುವುದು/ಪ್ರಶ್ನಿಸಬೇಕಾದದ್ದು 'ಅಭಿವೃದ್ಧಿಯನ್ನು'. ಬಂಡವಾಳ ನಿರ್ದೇಶಿತ ಮಾರುಕಟ್ಟೆಯ ಅಭಿವೃದ್ಧಿ ವ್ಯಾಖ್ಯಾನ ಮತ್ತು ಪೋಷಕ ಮಾರುಕಟ್ಟೆಯಾಧಾರಿತ ಜೀವನ ಕ್ರಮಗಳ ನಡುವಿನ ಸಂಘರ್ಷಗಳ ಕಥನ ಈ ಹೊತ್ತಿನ ಅಗತ್ಯ. ಪರಿಸರ ಒಡ್ಡುವ ಎಲ್ಲ ನ್ಯೂನತೆಗಳೊಡನೆ ಬದುಕುವುದೂ ಒಂದು ಕೌಶಲ. ಕೇವಲ ವಸ್ತುವಾಗಲೀ ಹಣವಾಗಲೀ ಒಂದು ಸಮೂಹದ ಅಭಿವೃದ್ಧಿಯನ್ನು ನಿರ್ಧರಿಸುತ್ತಿದ್ದರೆ, ಈ ಪ್ರಶ್ನೆಯನ್ನು ನಾನು ಕೇಳಲೇಬೇಕು. ನನ್ನ ಅಭಿವೃದ್ಧಿಯ ವ್ಯಾಖ್ಯಾನಕಾರರು ಯಾರು? ನಾನು ಹೇಗೆ ಅಥವಾ ಎಂಥವಳಾಗಿ ಬಾಳಬೇಕೆಂದು ಯಾರು ನಿರ್ಧರಿಸಬೇಕು?

ನನ್ನ ಒಟ್ಟಾರೆ ಬದುಕಿನ ಶೈಲಿಯ ಅಂತಿಮ ನಿರ್ಧಾರ ನನ್ನಿಂದಲೇ ಆಗಬೇಕು. ಅದನ್ನು ನನ್ನ ಸುತ್ತಲಿನ ನಿಸರ್ಗದೊಡನೆ ಹೊಂದಿಸಿಕೊಳ್ಳುವ ಎಲ್ಲ ಆಯ್ಕೆಗಳೂ ನನಗಿರಬೇಕು. ಸ್ವಾತಂತ್ರ್ಯವೆಂದರೆ ಹೆಚ್ಚು ಅವಕಾಶಗಳೆಂದೇ ಅರ್ಥ. ನನ್ನ ಸ್ವಾಯತ್ತತೆಯು ನನ್ನ ಸ್ವಾತಂತ್ರ್ಯ. ಜಾಗತೀಕರಣವು ಸ್ಥಳೀಯ ಬದುಕಿನ ಕ್ರಮಕ್ಕೆ ವ್ಯತಿರಿಕ್ತವಾದುದು ಮತ್ತು ಸ್ಥಳೀಯ ಪ್ರಜ್ಞೆಯನ್ನು ಮಸುಕಾಗಿಸಿ ಅಮಾನ್ಯಮಾಡುತ್ತದೆ. ಮಾರುಕಟ್ಟೆಯು ಮುಂದಿಡುವ ಅವಶ್ಯಕತೆಗಳು ಅಥವಾ ಕೊರತೆಗಳು ನನ್ನವಾಗಬೇಕಿಲ್ಲ. ಉಪಭೋಗ ಸಂಸ್ಕೃತಿಯ ಸಂಕೇತಗಳಾದ ಟಿ.ವಿ. ಆಗಲಿ, ಮೊಬೈಲ್ ಆಗಲಿ ನನ್ನ ಮಣ್ಣಿನ ಗುಡಿಸಲಿಗೆ ಬಂದ ಮಾತ್ರಕ್ಕೆ ನಾನು ಸಿರಿವಂತನಾದೆ ಎಂದಲ್ಲ. ಇಂತಹ ವಸ್ತುಗಳನ್ನು ನಾನು ಬಳಸಲೇಬೇಕೆಂಬ ಪರೋಕ್ಷ ಒತ್ತಡವು ನನ್ನ ಅಗತ್ಯಗಳ ನಿರ್ಧಾರವನ್ನು ನನ್ನಿಂದ ಕಿತ್ತುಕೊಳ್ಳುತ್ತದೆ. ಸುಮಾರು ಆರು ಸಾವಿರ ಬತ್ತದ ತಳಿಗಳನ್ನು ಬೆಳೆದು ಉಣ್ಣುವ ನನ್ನ ಆಹಾರವನ್ನು ಕೇವಲ ಸೋನಾಮಸೂರಿಗೋ, ಬಾಸುಮತಿಗೋ ಅನಿವಾರ್ಯವಾದ ಮಿತಿಗೊಳಪಡಿಸುವುದು ನನ್ನ ಸ್ವಾತಂತ್ರ್ಯಹರಣವಲ್ಲದೇ ಮತ್ತೇನು? ಅದು ನನ್ನ ನಾಲಗೆಯ ರುಚಿಸಂಸ್ಕಾರಕ್ಕೆ ಮಾಡುವ ಅವಮಾನ ಕೂಡ. ಹೀಗೆ ಎಲ್ಲವನ್ನೂ ಏಕಕ್ಕೆ ಎರಕಹೊಯ್ಯುವ ಪ್ರಕ್ರಿಯೆಯು ಅಂತಿಮವಾಗಿ ಏಕಾಧಿಕಾರದ ಕಡೆಗೆ ಕರೆದೊಯ್ಯುತ್ತದೆ ಎಂಬುದೀಗ ಅರಿವಾಗಿರುವ ಸಂಗತಿಯಾಗಿದೆ.

ಕೈಗಾರಿಕಾ ಕ್ರಾಂತಿಯವರೆಗೆ ಕೆಲವೇ ವಸ್ತುಗಳನ್ನು ಹೊಂದಿ ಹಿತವಾಗಿ ಬಾಳುವುದು ಸಾಧ್ಯವಿತ್ತು. Thanks to subsistence economy! ಕುಟುಂಬಗಳಿಗಾಗಿ, ಸಮುದಾಯಕ್ಕಾಗಿ ಉತ್ಪಾದಿಸುವ ಸಂಪ್ರದಾಯವು ಜೀವೋಪಾಯಿಯಾಗಿತ್ತು. ಅದ್ದರಿಂದಲೇ ಫ್ರೆಂಚ್ ತತ್ವಜ್ಞಾನಿ ಎಥೆಲ್ ಕಬಿಂಡಾಬ್ಯುಟ್ ಬಡತನವು ಮನುಕುಲ ನಾಗರೀಕತೆಯ ಸಹಜ ಸ್ಥಿತಿ ಎನ್ನುತ್ತಾನೆ. Marshal Sahlins ಕೂಡ ಶಿಲಾಯುಗದಲ್ಲಿ ಬಡತನ ಮಾನವನಿಗೆ ಅಪರಿಚಿತವಾಗಿತ್ತು ಹಾಗೂ ಬಡತನವು ನಾಗರೀಕತೆಯ ಆವಿಷ್ಕಾರ ಎಂದಿದ್ದಾನೆ. ಈ ವಾಕ್ಯಗಳನ್ನು ಪ್ರಚಲಿತ ವಿಶ್ವಬ್ಯಾಂಕ್ ಹೇಗೆ ಅಪವ್ಯಾಖ್ಯಾನಕ್ಕೀಡುಮಾಡಿದೆ ಎಂಬುದನ್ನು ಗಮನಿಸುವುದಾದರೆ:

೨೦೦೧ರ ವಿಶ್ವಬ್ಯಾಂಕ್ ವರದಿಯ ಲೇಖಕಿ ದೀಪಾ ನಾರಾಯಣ್ ಪ್ರಕಾರ ಬಡವರೆಂದರೆ ದಿನಕ್ಕೆ ಒಂದು ಅಥವಾ ಎರಡು ಡಾಲರ್‌ಗಳಿಗಿಂತ ಕಡಿಮೆ ಗಳಿಸುವವರು. ಅವರ ತಂಡ ಎದುರಾಗುವ ಸುಮಾರು ಅರುವತ್ತು ಸಾವಿರ ಬಡವರನ್ನು ಅವರು ಅಳೆಯುವುದು ಇದೇ ಮಾಪನದಿಂದ. ಈ ಆಧಾರದ ಮೇಲೆ ವಿಶ್ವದ ಜನಸಂಖ್ಯೆಯಲ್ಲಿ ಶೇಕಡಾ ೫೬ರಷ್ಟು ಮಂದಿ ಬಡವರಿದ್ದಾರೆ. ನಾಗರೀಕತೆಯ ಇತಿಹಾಸದಲ್ಲಿ ಇದೇ ಪ್ರಥಮ ಬಾರಿಗೆ ಇಷ್ಟೊಂದು ಪ್ರಮಾಣದ ಜನ ಅವರೆಲ್ಲರ ವೈವಿಧ್ಯಮಯ ಸಂಸ್ಕೃತಿ

ಮತ್ತು ಪರಿಸರಗಳೊಂದಿಗೆ ವಿಶ್ವ ಆರ್ಥಿಕ ಮಾರುಕಟ್ಟೆಯಲ್ಲಿ ಬಡವರಾಗಿ, ಯಾಚಿಸುವವರಾಗಿ ದಾಖಲಾಗಿದ್ದಾರೆ.

ನಮ್ಮ ಬದುಕು ಒಂದು ಜೀವಜಾಲ. ಇಲ್ಲಿ ಯಾವುದೂ ಮುಖ್ಯವೂ ಅಲ್ಲ ಅಮುಖ್ಯವೂ ಅಲ್ಲ. ಜನಸಮುದಾಯಗಳಿಗೆ ಬದುಕಿಗೆ ಬೇಕಾದ ಜೀವಪೋಷಕಾಂಶಗಳು ಸಮುದಾಯದಿಂದಲೇ ದೊರಕಬೇಕು. ತಮ್ಮ ಕಷ್ಟಕಾಲದಲ್ಲಿ ಕರ್ತೃತ್ವ ಶಕ್ತಿಯಿಂದ ಪರಿಸರದ ಸಂಪನ್ಮೂಲಗಳಿಗೆ ಹಾನಿಯಾಗದಂತೆ ಜೀವಪ್ರೇರಕವಾಗಿ ಬದುಕುವ ಭೂಮಿಕೆಯನ್ನು ಸಮುದಾಯಗಳು ಕಟ್ಟಿಕೊಡಬೇಕು. ಹೊಂದಾಣಿಕೆಯ ಮನೋಭಾವವು ಇಂತಹ ಪೋಷಕ ಆರ್ಥಿಕತೆಯ ರೂಢಿಪರಂಪರೆಗಳಲ್ಲಿ ಮೈಗೂಡಿರುತ್ತದೆ. ಬಡತನಕ್ಕೂ ದಾರಿದ್ರ್ಯಕ್ಕೂ ವ್ಯತ್ಯಾಸವಿದೆ. ಬಡತನವೆಂಬುದು ಅಥವಾ ಅಂತಹ ಬದುಕಿನ ರೀತಿಯು ತನ್ನ ಮತ್ತು ತನ್ನ ಸುತ್ತಲ ಜನರೊಂದಿಗೆ ಹಂಚಿಕೊಳ್ಳುತ್ತ, ವಿನಿಮಯ ಮಾಡಿಕೊಳ್ಳುತ್ತ ಸಂಬಂಧವನ್ನು ಕಟ್ಟುವ ರೀತಿ. ತನ್ನನ್ನೂ, ಪರರನ್ನೂ, ಸಾಮಾಜಿಕ ಸ್ವಾಸ್ಥ್ಯವನ್ನೂ, ಪ್ರಕೃತಿಯ ಆರೋಗ್ಯವನ್ನೂ ಹೆಪ್ಪಿಟ್ಟು ಕಾಯ್ದಿಡುವ ಸ್ಥಿತಿ. ಬಡತನವು ಸಾಂಸ್ಕೃತಿಕ ಭ್ರಷ್ಟತೆ ಮತ್ತು ವಿಷಯಲಂಪಟತೆಯಿಂದ ಸಮುದಾಯವನ್ನು ಕಾಪಾಡಿದರೆ, ದಾರಿದ್ರ್ಯವು ಸಮುದಾಯಗಳ ಕರ್ತೃತ್ವವನ್ನು ನಾಶಗೊಳಿಸಿ ಭ್ರಷ್ಟತೆಯ ಹೀನಸ್ಥಿತಿಗೆ ಕೊಂಡೊಯ್ಯುತ್ತದೆ. ವ್ಯಕ್ತಿಯು ಹೊಸ ಹೊಸದಾಗಿ ಬಂಡವಾಳಶಾಹಿಯ ಅಗತ್ಯಕ್ಕೆ ಅನುಗುಣವಾಗಿ ಸೃಷ್ಟಿಯಾಗುವ ಅವಶ್ಯಕತೆಗಳನ್ನು ಕೊಂಡುಕೊಳ್ಳುವ ಗ್ರಾಹಕನಾಗಿ ಮಾತ್ರವೇ ಜೀವಿಸಿರುತ್ತಾನೆ. ಇಂತಹ ಗ್ರಾಹಕರು ದರಿದ್ರರು, ಬಡವರಲ್ಲ. ಇವರ ಸೈನ್ಯ ಹೆಚ್ಚಾದಂತೆಲ್ಲ ಮಾರುಕಟ್ಟೆ ಆರ್ಥಿಕತೆಯು ವಿಜೃಂಭಿಸುತ್ತದೆ.

ಬಡತನದ ವ್ಯಾಖ್ಯೆಯನ್ನು ಸಾರ್ವತ್ರಿಕಗೊಳಿಸುವುದು ಸಾಧ್ಯವಿಲ್ಲ. ಅದರ ವಿಸ್ತಾರ ಏಕಗ್ರಹಿಕೆಗೆ ಸಿಗುವಂಥದ್ದಲ್ಲ. ಅದು ಏಕ ಕಾಲದಲ್ಲಿ ಇತ್ಯಾತ್ಮಕವೂ ಆಗಬಲ್ಲದು, ನೇತ್ಯಾತ್ಮಕವೂ ಆಗಬಲ್ಲುದು. ಅದು ಸಾಪೇಕ್ಷ, ಸಾಂದರ್ಭಿಕ ಮತ್ತು ಸಂಸ್ಕೃತಿ ನಿರ್ಧಾರಿತವಾಗಿರುತ್ತದೆ. ಯಾವುದೇ ವ್ಯಾಖ್ಯೆಗಳು ಸಾರ್ವತ್ರಿಕಗೊಂಡಷ್ಟು ಅಂತಿಮವಾಗಿ ವ್ಯಾಖ್ಯಾನಕಾರರ ಪರವಾಗಿರುತ್ತವೆಯೇ ಹೊರತು ವ್ಯಾಖ್ಯಾನಗೊಂಡವರ ಪರವಾಗಿರುವುದಿಲ್ಲ. ಬಡತನವನ್ನು ವ್ಯಾಖ್ಯಾನಿಸುವವನ ಕುತಂತ್ರ ಮತ್ತು ಉದ್ದೇಶಗಳನ್ನು ಅವನ ವ್ಯಾಖ್ಯೆ ತಿಳಿಸುವುದೇ ಹೊರತು ಬಡವರ ಬದುಕನ್ನಲ್ಲ. ಬಡತನದ ನಿಜಸಮಸ್ಯೆಯನ್ನು ವಿಶ್ವಬ್ಯಾಂಕು ತನ್ನದೆಂದು ಭಾವಿಸಿಲ್ಲ. ಅವರ ಯಾವುದೇ ಮೂಲಭೂತ ಸಮಸ್ಯೆಯನ್ನು ಅದು ಎದುರಾಗುತ್ತಿಲ್ಲ. ಅದು ಹೇಳುತ್ತಿರುವ ಅಭಿವೃದ್ಧಿ ಮಂತ್ರವು ಜೀವಾವರಣವನ್ನು ಆತಂಕಕ್ಕೆ ತಳ್ಳುತ್ತಿದೆ. ಇದರಿಂದಾಗಿ ಪೋಷಕ ಆರ್ಥಿಕತೆಯು ಆತಂಕಕ್ಕೀಡಾಗಿದೆ. ಇದು ಬಡವರ ಚೇತನವನ್ನು ಅವರ ಬದುಕುವ ಕಲೆಯನ್ನು ನಾಶಮಾಡುತ್ತದೆ. ಹಾಗೆಂದು ಬಡವರಿಗೆ ಹಣ ಬೇಡವೆಂದಲ್ಲ. ತಮ್ಮ

ಸ್ವಾಯತ್ತನೆಲೆಗಳನ್ನು ಕಳೆದುಕೊಂಡ ಬಡವರು ಅನಿವಾರ್ಯವಾಗಿ ಮಾರುಕಟ್ಟೆ ನಿರ್ಧರಿತ ಬದುಕಿಗೆ ವರ್ಗಾವಣೆಯಾಗಿ ತಮ್ಮ ಜೀವನ ಕೌಶಲಗಳನ್ನು, ಕರ್ತೃತ್ವ ಶಕ್ತಿಯನ್ನು ಕೇವಲ ಧನಾರ್ಜನೆಗಾಗಿ ಬಳಸಬೇಕಾದ ಅನಿವಾರ್ಯಸ್ಥಿತಿಗೆ ದೂಡಲ್ಪಡುತ್ತಾರೆ. ಇಂತಹ ಮಾರುಕಟ್ಟೆಯಲ್ಲಿ, ಅಸಹಜವಾಗಿ, ಆತ್ಮರಹಿತ ಅನಾಮಿಕ ವಸ್ತುಗಳಾಗಿ ಮಾರ್ಪಾಡಾಗುತ್ತಾರೆ.

ಮಹಿಳೆ ಕೂಡ ಬಡತನದಂತೆಯೇ ಏಕಗ್ರಹಿಕೆಗೆ, ಏಕವ್ಯಾಖ್ಯಾನಕ್ಕೆ ಸಿಗುವಂಥವಳಲ್ಲ. ಬಡತನದಂತೆಯೇ ಅಧಿಕಾರ ಕೇಂದ್ರಗಳು ನೀಡುವ ವ್ಯಾಖ್ಯಾನಗಳನ್ನಾಧರಿಸಿ ಹೆಣ್ಣನ್ನು ಅರ್ಥೈಸಲಾಗುವುದಿಲ್ಲ. ಹೆಣ್ಣು ಏಕಾಕಾರಿಯೂ ಅಲ್ಲ ಮಾರುಕಟ್ಟೆಯು ನಿರ್ಧರಿಸುವ ಸರಕೂ ಅಲ್ಲ. ಹೆಣ್ಣಿನ ಸ್ವಾಯತ್ತನೆಲೆಗಳ ಶೋಧನೆ ಬಡತನದ ಶೋಧಕ್ಕಿಂತಲೂ ವೈವಿಧ್ಯಮಯವಾದುದು. ಜಗತ್ತಿನಾದ್ಯಂತ ಇರುವ ನೂರಾರು ಜೀವನ ಶೈಲಿಗಳ, ಕರ್ತೃತ್ವ ಶಕ್ತಿಗಳ ಪ್ರತಿನಿಧಿಯಾಗಿರುವ ಹೆಣ್ಣನ್ನು ನಿರ್ದಿಷ್ಟಗೊಳಿಸಿ ಸೀಮಿತಗೊಳಿಸಲು ಬಾರದು. ಮಹಿಳೆಯ ಅಸ್ಮಿತೆಯು ಜಾಗತೀಕರಣದ ಆರ್ಥಿಕತೆಯ ಅಧಿಕಾರದ ಎದುರು ತನ್ನೆಲ್ಲ ಸೌಂದರ್ಯವನ್ನು ಕಳೆದುಕೊಂಡ ಕೇವಲ ಬಿಕರಿಗಾಗಿ ಇರುವ ವಸ್ತುವಾಗುವುದು ಸಾಂಸ್ಕೃತಿಕ ದಾರಿದ್ರ್ಯದ ಅತಿರೇಕ. ಅವಳನ್ನು ಕೇವಲ ಲೈಂಗಿಕತೆಯ ಸರಕೆಂದುಕೊಳ್ಳುವುದು ಮತ್ತು ಹಾಗೆ ಇರುವುದೇ ತನ್ನ ನಿಜಸ್ಥಿತಿ ಎಂದು ಅವಳು ತಿಳಿಯುವುದು ಜಾಗತೀಕರಣ ಮಾಡಿರುವ ಮಾಂತ್ರಿಕ ಕೇಡು. ಜಾಗತೀಕರಣವು ಪ್ರಮಾಣಗಳನ್ನು ಬಯಸುವುದು ಭಾಷೆಯ ಮೂಲಕ, ಸಂಕೇತಗಳ ಮೂಲಕ ಮತ್ತು ದೇಹಗಳನ್ನು ಅಧೀನಗೊಳಿಸುವುದರಿಂದ. ತನ್ನ ಆಧಿಪತ್ಯ ಮಾತ್ರವೇ ಸತ್ಯ. ಈ ಅಧಿಕಾರವನ್ನು ಒಪ್ಪಿಕೊಂಡರೆ ಮಾತ್ರ ನಮ್ಮೆಲ್ಲರಿಗೆ ಬದುಕುವುದು ಸಾಧ್ಯ ಎಂಬ ನಿಲುವಿಗೆ ಸವಾಲಾಗುವುದು ಸ್ವಾಯತ್ತ ಮಹಿಳಾ ಚಿಂತನೆಗಳು.

## ಭಾಗ –೨

ಪ್ರಚಲಿತವಲ್ಲಿರುವ ಸ್ತ್ರೀವಾದಿ ಚಿಂತನಾ ನೆಲೆಗಳು ತಮ್ಮನ್ನು ಗುರುತಿಸಿಕೊಳ್ಳಲು, ದಾಖಲಿಸಲು, ಪ್ರತಿಷ್ಠಾಪಿಸಲು ಕಂಡುಕೊಂಡಿರುವ ಮಾರ್ಗಗಳಲ್ಲಿ:

೧. ಸಮಾನ ಹಕ್ಕು, ಹಾಗೂ ಸಬಲೀಕರಣಕ್ಕಾಗಿ ನಡೆಯುವ ಮಹಿಳಾ ಹೋರಾಟಗಳು. ಈ ನೆಲೆಯಲ್ಲಿ ಸುಂದರ ಹೆಣ್ಣಿನ ಮಾದರಿಯಿಂದ ಹಿಡಿದು ಅವಳ ಬದುಕಿನ ಸಾರ್ಥಕ್ಯದವರೆಗೆ 'ಸ್ತ್ರೀಮೀಮಾಂಸೆ'ಯನ್ನು ಪುರುಷ ಮುಂತಾದ ಅಧಿಕಾರ ಕೇಂದ್ರಗಳು ರೂಪಿಸಿ ನೀಡುತ್ತವೆ. ಇವಳೇನಿದ್ದರೂ 'ಪಡೆಯುವವಳಾಗುತ್ತಳೆಯೇ' ಹೊರತು ಅಂತಹ ಅಧಿಕಾರ ಕೇಂದ್ರಗಳನ್ನು ಪ್ರಶ್ನಿಸಲಾರಳು. ಇದನ್ನು ಮೀರಿ ಬರುವ ಪ್ರತಿಭಟನೆಗಳನ್ನು ಸಾಂಕೇತಿಕ ಗೌರವಗಳನ್ನು ನೀಡುವುದರ ಮೂಲಕ, ಸಂಪ್ರದಾಯಗಳ

ಮೂಲಕ (ಉದಾ: ಮಾತೃದೇವೋಭವ, ಪಾತಿವ್ರತ್ಯಧರ್ಮ ಇತ್ಯಾದಿ) ನಿರ್ವಹಿಸಲಾಗುತ್ತದೆ.

೨. ಎರಡನೆಯದು ಸ್ವಾಯತ್ತನೆಲೆಯ ಚಿಂತನೆಗಳು. ಹೆಣ್ಣನ್ನು ಪೂರ್ಣಪ್ರಮಾಣದ ಸ್ವಾಯತ್ತ ಸಂಸ್ಥೆಯನ್ನಾಗಿ ಕಾಣುವ ಈ ಧಾರೆ, ಸ್ತ್ರೀವಾದಿ ಮೀಮಾಂಸೆಯನ್ನು ಆಯಾ ಸಂದರ್ಭಕ್ಕನುಗುಣವಾಗಿ, ಕಾಲ ದೇಶಬದ್ಧವಾಗಿ ಬದುಕಿನ ಶೈಲಿಯನ್ನು ಸ್ವತಂತ್ರವಾಗಿ ಒದಗಿಸಿಕೊಳ್ಳಬಲ್ಲ ಚೈತನ್ಯವೆಂದು ಗುರುತಿಸುತ್ತದೆ. ಇಂತಹ ಸ್ವಾಯತ್ತ ನೆಲೆಯ ಅಭಿವ್ಯಕ್ತಿಗಳು ಮಾತ್ರವೇ, ಜಾಗತೀಕರಣವನ್ನು ಸಮರ್ಥವಾಗಿ ಎದುರಿಸಬಲ್ಲವು. ಏಕೆಂದರೆ, ಸ್ಥಳೀಯ ಸಮುದಾಯದ ಸಹಬಾಳ್ವೆಯ ಸಾಮರ್ಥ್ಯವೃದ್ಧಿಯಿಂದಲೇ ತನ್ನ ಯಶಸ್ಸನ್ನು ರೂಪಿಸಿಕೊಳ್ಳುವ ಪ್ರಕ್ರಿಯೆ ಮಾತ್ರವೇ ಅಧಿಕಾರ ಕೇಂದ್ರಗಳನ್ನು ನಿರಸನಗೊಳಿಸಬಲ್ಲದು; ಇಂತಹ ಸ್ವಾಯತ್ತನೆಲೆಯ ಚಿಂತನೆಗಳು ಕನ್ನಡ ಸಾಹಿತ್ಯದಲ್ಲಿ ವ್ಯಕ್ತವಾಗಿರುವ ಒಂದೆರಡು ಉದಾಹರಣೆಗಳನ್ನು ನೋಡಬಹುದು.

ಹೆಣ್ಣಿನ ಸಂಭ್ರಮಕ್ಕೆ ಮತ್ತು ಅಪಮಾನಕ್ಕೆ ಕಾರಣವಾಗುವ ಪ್ರಮುಖ ಸಂಗತಿ ದೇಹವೇ. ಹಾಗಾಗಿ ಸ್ತ್ರೀವಾದಿ ಚಿಂತನೆಗಳು ತಮ್ಮ ಯಾನವನ್ನು ಅನಿವಾರ್ಯವಾಗಿ 'ದೇಹ ಮೀಮಾಂಸೆ'ಯ ಮೂಲಕವೇ ಆರಂಭಿಸಬೇಕಾಗಿದೆ.

**ಅಲ್ಲಮಪ್ರಭುವಿನ ಒಂದು ವಚನ:**

**ಬಾಯೇ ಭಗವಾಗಿ**
**ಕೈಯೇ ಇಂದ್ರಿಯವಾಗಿ**
**ಹಾಕುವ ತುತ್ತುಗಳೆಲ್ಲ ಬಿಂದು ಕಾಣಿರೋ**
**ಪ್ರಥಮ ವಿಷಯ ಇಂತಿರಲಾಗಿ**
**ಅದೆಲ್ಲಿಯದೋ ಅದ್ವೈತ ಗುಹೇಶ್ವರಾ**

ನಮ್ಮಲ್ಲಿ ಇರುವಿಕೆಯನ್ನು ನಾವು ಸಾಕಾರಗೊಳಿಸಕೊಳ್ಳುವುದು ನಮ್ಮ ದೇಹದ ಮೂಲಕ ಈ ದೇಹವೆಂಬುದು ಕೇವಲ ವಾಹಕವಲ್ಲ. ವಾಸ್ತವವೂ ಇದರ ಮೂಲಕವೇ ದೊರಕಬೇಕು ಅತೀತವೂ ಇದರಿಂದಲೇ ನಿಲುಕಬೇಕು. ಇಲ್ಲಿ ಬಿಂದು ಎಷ್ಟು ಮುಖ್ಯವೋ ತುತ್ತೂ ಅಷ್ಟೇ ಮುಖ್ಯ. ನನ್ನ ದೇಹದ ಪ್ರತಿಯೊಂದು ಅವಯವವೂ ಅದರೊಟ್ಟಿಗೆ ಸಂಬಂಧವಿರುವ ಪ್ರತಿಯೊಂದು ಕ್ರಿಯೆಯೂ ಸಾವಯವ ಸಂಬಂಧದೊಂದಿಗೆ ಮಾತ್ರವೇ ಅನಾವರಣಗೊಳ್ಳಲು ಸಾಧ್ಯ. ಪ್ರಸ್ತುತ ಸಂದರ್ಭದಲ್ಲಿ ಹೆಣ್ಣಿನ ದೇಹಕ್ಕೆ ಎರಡು ಭಿನ್ನ ಮಾದರಿಯ ಶೋಷಣೆಗಳಿವೆ. ನನ್ನ ಕೌಶಲ್ಯಯುತ ಬೆರಳುಗಳು ಕೈಗಡಿಯಾರ ಅಥವಾ ಬಟ್ಟೆ ತಯಾರಿಕೆಯಲ್ಲಿ ತೋರುವ ಜಾಣ್ಮೆ, ಚಾತುರ್ಯದ ಸಂದರ್ಭದಲ್ಲಿ ಇರುವ ದೇಹವೇ ಬೇರೆ, ಜಾಹೀರಾತು ಮಾರುಕಟ್ಟೆಯಲ್ಲಿ

ಸಂಭ್ರಮವನ್ನೇ ಹೊದ್ದಂತೆ ಕಾಣುವ ಮಾದರಿ ದೇಹವೇ ಬೇರೆ. ಎರಡೂ ಬೇರೆ ಬೇರೆ ರೀತಿಯಲ್ಲಿ ಪೋಷಿತವಾಗುತ್ತಿರುತ್ತದೆ. ದೇಹವೆಂಬುದು ಯಾವತ್ತು ವಿಭಾಗಿಸಲ್ಪಟ್ಟು ಗ್ರಹಿಸಬೇಕಾದ ಚೇತನವಲ್ಲ. ಅದು ಕಾರ್ಯನಿರ್ವಹಿಸುವುದು ತನ್ನ ಅಖಂಡತೆಯಲ್ಲಿ. ಇಲ್ಲಿ ರೈತನೊಬ್ಬನು ತನ್ನ ಹೊಲದಲ್ಲಿ ಬೆಳೆದಿರುವ ಬೆಳೆಗೆ ಅಳಲಿನ ಅಥವಾ ಕೆಂಪು ಇರುವೆಗಳ ತೊಂದರೆ ಇದೆ ಎಂದು ತಾನು ಅಪೇಕ್ಷಿಸಿದ ಫಲ ಮಾತ್ರವೇ ಹೆಚ್ಚಬೇಕೆಂಬ ಕಾರಣಕ್ಕಾಗಿ ಕೀಟ ನಾಶಕಗಳ ಮೂಲಕ ಜೀವಜಂತುಗಳ ಹತ್ಯೆ ಮಾಡುತ್ತಾನೆಂದರೆ ನಮ್ಮ ಆತಂಕ ಇರಬೇಕಾದದ್ದು ದೇಹವನ್ನ ವಿಭಜಿಸಿ ಅನ್ವಯಿಸಿಕೊಂಡಂತೆ ಪ್ರಕೃತಿಯನ್ನೂ ಛಿದ್ರಗೊಳಿಸಿ ಕೇವಲ ಲಾಭ ಅಥವಾ ನಷ್ಟದ ದೃಷ್ಟಿಯಿಂದ ಗ್ರಹಿಸುತ್ತಿರುವುದರ ಬಗ್ಗೆ.

ನಾನು ತೊಡುತ್ತಿರುವ ಬಳೆ, ಸೀರೆ, ಚಪ್ಪಲಿ, ಬ್ಯಾಗು ಇವುಗಳು ನನ್ನ ಅವಶ್ಯಕತೆಗಳನ್ನು ಪೂರೈಸುತ್ತಿರುತ್ತವೆ. ಆದರೆ ಅವು ಉದ್ಯೋಗ ಮಾರುಕಟ್ಟೆಯಲ್ಲಿ ನನ್ನ ಜೊತೆಯವರಿಗೆ ಉದ್ಯೋಗ ನೀಡುವುದಷ್ಟೆ ಮುಖ್ಯವಾಗಿ ನನ್ನ ಪರಿಸರದ ಸಂಪನ್ಮೂಲಗಳನ್ನು ಅವುಗಳಿಗೆ, ಅವುಗಳ ಅಸ್ತಿತ್ವಕ್ಕೆ ಧಕ್ಕೆಯಾಗದಂತೆ ಅವಶ್ಯಕತೆಗಳನ್ನು ಪೂರೈಸುತ್ತಿದ್ದರೆ ಮಾತ್ರವೇ ಈ ವಸ್ತುಗಳ ಇರುವಿಕೆ ನನಗೆ ಸಂತಸ ತರುತ್ತದೆ. ನನಗೆ ದೊರಕುವ ಎಲ್ಲ ಸಂತೋಷಗಳೂ, ದೇಹ ಮತ್ತು ಅದು ಪೋಷಿಸಲ್ಪಡುತ್ತಿರುವ ಆವರಣದ ಸಂರಕ್ಷಣೆಯೊಂದಿಗೆ ಪಡೆಯಬಲ್ಲುದಾದರೆ ಮಾತ್ರವೇ ಮನೋಲ್ಲಾಸ ನೀಡಬಲ್ಲುದು. ಪಾಶ್ಚಾತ್ಯ ಸ್ತ್ರೀವಾದವು ಹೆಣ್ಣು ತಾನೇ ಅನ್ಯಳಲ್ಲ ಬದಲಿಗೆ ಅನ್ಯಳಾಗಿಸಲ್ಪಟ್ಟವಳು ಎಂದು ವಾದಿಸುತ್ತದೆ. ಮತ್ತೂ ಮುಂದುವರಿದು ಅವಳು ಅನ್ಯಳಾಗಿ ಉಳಿಯಲು, ಅನ್ಯಳಂತೆ ವರ್ತಿಸಲು ಕಾರಣವಾಗುವುದು ಅವಳನ್ನು ರೂಪಿಸುವ ಸಾಮಾಜಿಕ ಪ್ರಜ್ಞೆ ಎಂದು ತಿಳಿಯುತ್ತದೆ.

೧೯೯೦ರಿಂದ ಇತ್ತೀಚೆಗೆ ಜೂಡಿತ್ ಬಟ್ಲರ್, ಜಂಡರ್ ಟ್ರಬಲ್ ನಲ್ಲಿ ಪ್ರಚುರಪಡಿಸಿದ "ಭಾಷೆಯು ಲೈಂಗಿಕತೆಯನ್ನು ಕಟ್ಟಿಕೊಡುತ್ತದೆ" ಎಂಬ ಪ್ರಖರವಾದ ವಾದವು ಸ್ತ್ರೀವಾದೀ ಚಿಂತನೆಯನ್ನು ವಿಸ್ತಾರಗೊಳಿಸಿದೆ. ಜಂಡರ್ ಎಂಬುದು ಸಾಮಾಜಿಕ ನಿರ್ಮಿತಿ ಆದರೂ ಸಹ ಎಲ್ಲ ಹೆಣ್ಣಿನ ದೇಹಗಳು ಒಂದೇ ತರಹವಾಗಿ ಅನ್ಯಗೊಳಿಸಲ್ಪಡುವುದಿಲ್ಲ. ಮಹಿಳೆಯ ದುರ್ಗತಿಗೆ, ಅಧೀನಕ್ಕೆ ಒಂದೇ ಬಗೆಯ ಕಾರಣವಿಲ್ಲ ಹಾಗೆಯೇ ಏಕಸಮಾಧಾನವೂ ಇಲ್ಲ. ಮೇರಿ ಜೋ ಫ್ರಗ್ ಸಲಹೆ ನೀಡುವುದೇನೆಂದರೆ : ಸಮಸ್ಯೆ ಇರುವುದು ಮಾನವ ಅನುಭವವು ಭಾಷೆಯ ಮೂಲಕವೇ ಗುರುತಿಸಬೇಕಾದುದರ ಅನಿವಾರ್ಯತೆಯಲ್ಲಿ. ಅಧಿಕಾರವು ನೇರವಾಗಿಯಷ್ಟೇ ಚಲಾಯಿಸಲ್ಪಡುವುದಿಲ್ಲ. ಬದಲಾಗಿ ಭಾಷೆಯು ಹೇಗೆ ನಮ್ಮ ವಾಸ್ತವಗಳನ್ನೂ ರೂಪಿಸಿ ಅಧಿಕಾರದಿಂದ ನಿರ್ಬಂಧಿಸುತ್ತದೆ ಎಂಬುದೂ ಕೂಡ ಮುಖ್ಯ. ಅವಳ ಮತ್ತೊಂದು ವಾದವೆಂದರೆ ಲೈಂಗಿಕತೆಯೆಂಬುದು ಸಹಜವಾದದೆಂದು (ಅದರ ಜೈವಿಕತೆಯನು.

ಹೊರತುಪಡಿಸಿ) ನಿರ್ದಿಷ್ಟವಾದುದ್ದೆಂದೂ, ಪರಿಪೂರ್ಣ ವ್ಯಾಖ್ಯೆಯನ್ನು ನೀಡಲು ಸಾಧ್ಯವಿಲ್ಲ. ಏಕೆಂದರೆ ಲೈಂಗಿಕತೆಯು ಭಾಷೆಯು ಕಟ್ಟುವ ಅರ್ಥಗಳ ವ್ಯವಸ್ಥೆಯ ಒಂದು ಭಾಗ.

ಸಾಂಸ್ಕೃತಿಕ ರೀತಿ ನೀತಿಗಳು ಮಹಿಳೆಯ ದೇಹದ ಮೇಲೆ ಕೊರೆಯುವ ಅರ್ಥಗಳು ಅವಳ ಸಾಮಾಜಜಿಕ ಅಸ್ತಿತ್ವವನ್ನು ನಿರ್ಧರಿಸುತ್ತವೆ. ಆಯಾ ಕಾಲದ ಸಾಮಾಜಿಕ ಪ್ರಜ್ಞೆಯು ಅವಳ ಲೈಂಗಿಕತೆಗೆ ಹೊಸ ಹೊಸ ವ್ಯಾಖ್ಯಾನಗಳನ್ನು ಅಧಿಕಾರ ಕೇಂದ್ರಗಳೊಂದಿಗೆ ಸಮೀಕರಿಸಿ ಅವಳ ದೇಹವನ್ನು ಉಪಯೋಗಿಸಿಕೊಳ್ಳುತ್ತಲೇ ಬಂದಿವೆ. ಉಳಿದೆಲ್ಲಾ ಅರ್ಥನಿರ್ಮಾಣ ವ್ಯವಸ್ಥೆಗಳಂತೆಯೇ ಲೈಂಗಿಕತೆಯೆಂಬುದೂ ಕೂಡ ಒಂದು ಹತಾರ. ಭ್ರಷ್ಟಗೊಂಡ ಲೈಂಗಿಕತೆಯ ಸಂದರ್ಭವಲ್ಲಿ ಮಹಿಳೆಯ ದೇಹವು ದಂಡನೆಗೊಳಗಾಗುತ್ತದೆ ; ಬದಲಾಗುವ ಸ್ವಾಯತ್ತ ನೆಲೆಗಳಲ್ಲಿ ಜೀವ ಪೋಷಕವಾಗಿ ಅನಾವರಣಗೊಂಡಿವೆ.

ಜಾಗತೀಕರಣದ ಈ ಸಂದರ್ಭದಲ್ಲಿ ತನ್ನ ಪ್ರತಿಯೊಂದು ಇಂದ್ರಿಯವೂ ಛಿದ್ರವಾಗಿ ಬಿಕರಿಗೆ ಇಟ್ಟಿರುವ ಮಾರುಕಟ್ಟೆಯಲ್ಲಿ ಜಾಹೀರಾತು ಮಾದರಿಗಳನ್ನು ತಪ್ಪು ತಪ್ಪಾಗಿ ಅನುಸರಿಸಲು ಹೋಗಿ ತನ್ನ ದೇಹ ಮತ್ತು ಅದರ ಚಿಂತನೆಯ ನಡುವೆ ಇರುವ ಜೈವಿಕ ಸಂಬಂಧವನ್ನು ಅಪಮಾನಕ್ಕೀಡುಮಾಡುವುದೂ ಅಲ್ಲದೆ ತನ್ನ ಲೈಂಗಿಕತೆಯೊಂದು ಶಾಪ ಮತ್ತು ಅದರೊಟ್ಟಿಗೆ ಬರುವ ಎಲ್ಲ ಕ್ರಿಯೆಗಳೂ ಹೇರಲ್ಪಟ್ಟದ್ದು ಎಂದು ತಿಳಿಯುವುದು ಸಹಜವಾದದ್ದಲ್ಲ.

ಇದು ತುಂಬಾ ಯಡವಟ್ಟಿನ ಸನ್ನಿವೇಶ. ಹೆಣ್ಣು ಕ್ರಿಯಾಶೀಲಳಾಗುವುದು, ಕರ್ತೃತ್ವಶಕ್ತಿಯನ್ನು ಹೆಚ್ಚಿಸಿಕೊಳ್ಳಲು ಸಾಧ್ಯತೆಯಿರುವುದು ಅವಳು ತನ್ನ ದೇಹವನ್ನು ಅದರ ಎಲ್ಲ ಕಟ್ಟುಪಾಡುಗಳೊಂದಿಗೆ ಕ್ರಿಯಾಶೀಲವಾಗಿಸುವುದರ ಮೂಲಕ. ಆದರೆ ಲೈಂಗಿಕ ಕ್ರಿಯೆಯೊಂದರಿಂದಲೇ ಅವಳ ತೆರೆಯುವಿಕೆಯನ್ನು ಸಮೀಕರಿಸುತ್ತಿರುವ ಜಾಗತಿಕ ಪ್ರಜ್ಞೆಯು ಅವಳ ಅದಮ್ಯ ಶಕ್ತಿಯನ್ನು ನಿರಾಕರಿಸಿ ಅಪಮಾನಿಸುತ್ತಿದೆ. ಹೆಣ್ಣೆಂಬುದು ಒಂದು ಸ್ಥಿತಿ. ಅದು ಅವಳ ದೇಹದೊಂದಿಗೆ ಮಾತ್ರವೇ ಗುರುತಿಸಲ್ಪಡ ಬೇಕಾದದ್ದು. ಆದರೆ ಪುರುಷನ ನರನಾಡಿಗಳಲ್ಲಿ ಮಿಂಚೆಬ್ಬಿಸುವಂತಹದ್ದೇ ಮಾಧ್ಯಮಗಳಲ್ಲಿ ಆಕಾರಗೊಳ್ಳುತ್ತಿರುವ ಅವಳ ಆಕೃತಿಯು ಅವಳದ್ದಲ್ಲ. ಅವನಿಗೆ ಬೇಕಾದ ಹಾಗೆ ರೂಪಿಸಲ್ಪಟ್ಟದ್ದು. ಅವಳ ತೊಡುಗೆ ನೋಟ, ಮಾತು, ನಡೆ ಎಲ್ಲವೂ ಅವನನ್ನು ಒಲಿಸಿಕೊಳ್ಳಲೇ ಇರುವ ಒಂದಂಶದ ಕಾರ್ಯಯೋಜನೆಯಾಗಿ ಬದಲಾಗುತ್ತಿರುವುದು ಜಾಗತೀಕರಣ ಅವಳ ಮೇಲೆ, ಅವಳ ಸ್ವಾಯತ್ತ ಶಕ್ತಿಯ ಮೇಲೆ ಹೇರುತ್ತಿರುವ ಹೊರೆ. ಇದೇನು ಹೊರಬೇಕಾದ ಹೊರೆಯಲ್ಲ; ಇಳಿಸುವಂಥದ್ದು. ಸ್ವಾಯತ್ತ ಅಭಿವ್ಯಕ್ತಿ ಮಾದರಿಗಳು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಅನೇಕ ಧಾರೆಗಳಲ್ಲಿ

ಶಿವಮಂತ್ರವ ಕೇಳ ಕೇಳದಿರೆ ನವರಸ ಲಲ್ಲೆದೈನ್ಯವ ಕೇಳಿರಯ್ಯ
ಅಲಸದೆ ಲಿಂಗಪೂಜೆಯ ಮಾಡಿಯಲ್ಲದಿರೆ
ಮೊಲೆಯ ಮೇಲಣ ಕೈಯ ತೆಗೆಯದಿರಿ

ಒಲಿದೊಲಿದು ಲಿಂಗ ಪ್ರಸಾದವ ಕೊಳ್ಳಿ ಕೊಳ್ಳದಿರೆ
ಚಲ್ವೆ ಚಂದುಟಿಯಮೃತವ ನುಣ್ಣಿರೈಯ್ಯ
ಅಂಗ ಘ್ರಾಣೇಂದ್ರಿಯಗಳನೆಲ್ಲ ನಂಜುಂಡ
ಲಿಂಗನೊಳಿರಿಸಿ ನೀವು ಸುಖಿಯಾಗಿರಿ
ಅಂಗ ಸಂಗ ದೊರಕೊಂಡಿರಲು ಲಲಿ
ತಾಂಗಿಯರ ಓಂಗದಪ್ಪೆ ನೀವು ಸುಖಿಯಾಗಿರಯ್ಯ

-- ಅಜ್ಞಾತ ತತ್ವಪದಕಾರ. (ತತ್ವಪದಕಾರರು ಕಸಾಪ ಪ್ರಕಟಣೆ)

ಸ್ತ್ರೀ ಸ್ವಾಯತ್ತೆಯು ಯಾವುದೇ ಅಧಿಕಾರ ರೂಪಿತ ಪ್ರಮಾಣಗಳಿಗೆ ಬಂಧಿಯಲ್ಲ. ಅಧಿಕಾರದ ಭಾಷೆ ಹೇಳುವುದೆಲ್ಲ ಸತ್ಯವಲ್ಲ. ಅಧಿಕಾರದ ಸಂಸ್ಥೆಗಳನ್ನು ಪೋಷಿಸುವುದೇ ಪ್ರಮಾಣಗಳು. ಪರಂಪರಾನುಗತವಾಗಿ ಮಹಿಳೆಯು ಪುರುಷನ ಅನುಯಾಯಿಯಾಗಿ ಸಾಗಿ ಬಂದವಳು. ಸೀತೆಯಾಗಿ, ಸಾವಿತ್ರಿಯಾಗಿ ಅವನ ಏಳಿಗೆಗಾಗಿ ಶ್ರಮಿಸಿದವಳು. ಅವಳನ್ನು ಆ ದಿಕ್ಕಿನಲ್ಲಿ ಕೈ ಹಿಡಿದು ನಡೆಸಿದ್ದು ಶೀಲ, ಪಾವಿತ್ರ್ಯದಂತಹ ಪ್ರಮಾಣಗಳು. ಇದಕ್ಕೆ ಬದ್ಧವಾಗಿರುವುದೇ ಸ್ತ್ರೀ ಧರ್ಮವು. ಇದಕ್ಕೆ ವ್ಯತಿರಿಕ್ತವಾಗಿ ಸ್ವಾಯತ್ತತೆಯು ಅವಲಂಬಿಸುವುದು ಸ್ತ್ರೀ ಸ್ವಭಾವವನ್ನು. ಸಹಜವಾಗಿಯೇ ಇಂತಹ ಸ್ತ್ರೀ ಸ್ವಾಯತ್ತತೆಯು ಪ್ರಮಾಣಗಳನ್ನು ನಂಬುವುದಿಲ್ಲ. ಪ್ರಮಾಣಗಳೊಡನೆ ಸಂಘರ್ಷಕ್ಕಿಳಿಯುವ ಸ್ತ್ರೀ ಸ್ವಾಯತ್ತೆಯನ್ನು "ಮಲೆ ಮಾದೇಶ್ವರ" ಕಾವ್ಯದ ಸಂಕಮ್ಮನ ಸಾಲುಗಳು ಸಮರ್ಥವಾಗಿ ಚಿತ್ರಿಸುತ್ತದೆ. ಅಪವ್ಯಾಖ್ಯಾನಕ್ಕೀಡಾದ ಪಾವಿತ್ರ್ಯವನ್ನು ಅದರ ನಿಜ ಅರ್ಥದಲ್ಲಿ ಕಟ್ಟಿಕೊಡುತ್ತದೆ.

ಕೊಕ್ಕರ ಕೊನೆಯೋಳ ಹುಟ್ಟಿದ ಜೋಗೀಗೌಡನ ಮಗ ನೀಲಯ್ಯನು ಸಂಕಮ್ಮನನ್ನು ಮದುವೆಯಾಗುತ್ತಾನೆ. ಅವರ ಕುಲ ಪದ್ಧತಿಯ ಪ್ರಕಾರ ಊರಹಬ್ಬ ಮಾಡುವ ಸಲುವಾಗಿ ಮನೆಗೊಬ್ಬ ಮನುಷ್ಯನಂತೆ ಒಟ್ಟುಗೂಡಿ ಹೆಜ್ಜೇನು ಮಲೆಗೆ ಹೋಗಿ ಬೇಟೆಯಾಡಬೇಕಿರುತ್ತದೆ. ನೀಲೇಗೌಡನು ಒಂದು ವರ್ಷದಿಂದ ಬೇರೆ ಮನೆ ಮಾಡಿಕೊಂಡು ಊರ ಒಕ್ಕಲಾಗಿದ್ದುದರಿಂದ ಅವನೂ ಬೇಟೆಗೆ ತೆರಳಬೇಕಾಗುತ್ತದೆ. ಹೋಗುವುದು ಮೂರು ತಿಂಗಳು, ಬರುವುದು ಮೂರು ತಿಂಗಳು, ಬೇಟೆಯಾಡುವುದು ಮೂರು ತಿಂಗಳು. ಒಟ್ಟು ಸಂಕಮ್ಮನಿಂದ ದೂರವಾಗಿ ಒಂಬತ್ತು ತಿಂಗಳು ಹೊರಗುಳಿಯುವುದು ಅನಿವಾರ್ಯವಾಗುತ್ತದೆ. ಸಂಕಮ್ಮ ಚಂದದ ಚೆಲುವೆ. ಅವಳ ಚೆಲುವು, ಅಂದದ ದೇಹ ನೀಲೇಗೌಡನ ಅಧಿಕಾರ. ಅವರ ರಕ್ಷಣೆ ಅವನ ಜವಾಬ್ದಾರಿ.

ಅದರಂತೆಯೇ ಅವನು ಪತ್ನಿಯಿಂದ ಪಾತಿವ್ರತ್ಯದ ಪ್ರಮಾಣವನ್ನು ಬಯಸುತ್ತಾನೆ. ಬಲಗೈ ಭಾಷೆ ಕೇಳುತ್ತಾನೆ. ಅದಕ್ಕೆ ಸಂಕಮ್ಮ ಈ ರೀತಿ ಉತ್ತರಿಸುತ್ತಾಳೆ:

ಅಯ್ಯೋ ಯಜಮಾನ ಯಜಮಾನರೇ
ಎಂಥಾ ಪಾಪದ ಮಾತಾಡ್ತಾ ಇದ್ದೀರಿ
ಇಂಥಾ ಪಾಪದ ಮಾತಾಡಿ ನನಗೆ ಪಾಪ ಹೊರಿಸ್ಬೇಡಿ ಯಜಮಾನ
ನನಗೆ ಭಾವನಾಗಿರತಕ್ಕಂಥವರು ತಂದೆ ಸಮಾನವಲ್ಲವೇ ಯಜಮಾನ
ನನಗೆ ಮೈದುನನಾಗಿರ್ತಕ್ಕಂಥವರು ಮಕ್ಕಳು ಸಮಾನವಲ್ಲವೆ ಗುರುವೆ
ಇಂಥ ಪಾಪದ ಮಾತನ್ನಾಡಬೇಡ
ಪಾಪ ಹೊತ್ತೆನೊ ಯಜಮಾನ ||ಕೋರಸ್||
ಕೇಳೀ ಯಜಮಾನರೆ
ಭೂಮಿ ತಾಯಿ ಆಕಾಸವೇಣಿ ಸಾಕ್ಷಿಯಾಗಿ
ಪತಿಗೆ ಭಾಷೆ ಕೊಡುವುದಿಲ್ಲ ಯಜಮಾನ
ಭಾಷೆ ಕೊಟ್ಟಮೇಲೆ ನನ್ನ ಧರ್ಮ ಉಳಿಯೋದಿಲ್ಲ
ಶಿವಶಿವಾ ಪತಿವ್ರತೆಯಾದ ಸಂಕಮ್ಮ
ಭೂಮಿತಾಯಿ ಆಕಾಶವೇಣಿ ಸತ್ಯಮಾಡಿದೆ ಯಜಮಾನ
ಇನ್ನ್ಯಾರ ಸತ್ಯ ಮಾಡಬೇಕು
ನನ್ನ ತಾಯಿ ತಂದೆಗಳ ಪಾದಸಾಕ್ಷಿಯಾಗಿ ಭಾಷೆಕೊಡುವುದಿಲ್ಲ
ನಿಮ್ಮ ಕೂಡ ನಾನು ಬರುವುದಿಲ್ಲ ಯಜಮಾನ ಅಂದಳು

ಜೊತೆಗೆ ಕಟ್ಟಿರುವ ತಾಳಿಯನ್ನು ಕಿತ್ತುಕೊಟ್ಟೇನೇ ಹೊರತು ಭಾಷೆ ಕೊಡುವುದಿಲ್ಲವೆನ್ನುತ್ತಾಳೆ. ಹೀಗೆ ಉತ್ತರಿಸಿದ ಸಂಕಮ್ಮನ ಮೇಲೆ ಕ್ರೋಧಗೊಂಡ ನೀಲೇಗೌಡನು ಮಾಯಾಮಂತ್ರದ ಕಾವಲು ನೇಮಿಸಿ ಅವಳು ಎಲ್ಲಿಗೂ ಹೋಗದಂತೆ ಹಾಗು ಮತ್ತಾರು ಒಳಬಾರದಂತೆ ನಿರ್ಬಂಧಿಸಿ ಬೇಟೆಗೆ ಹೊರಡುತ್ತಾನೆ. ಸಂಕವ್ವನಿಗೆ ತಾಯಿ, ತಂದೆ, ಅಣ್ಣ, ತಮ್ಮ, ಭಾವ, ಮೈದುನ, ಅತ್ತೆ, ನಾದಿನಿ, ಸಂಗಾತಗಾತಿಯರು ಎಲ್ಲರನ್ನೂ, ಸಮುದಾಯವನ್ನು ಮರೆತು ತನ್ನ ಜೊತೆ ಹೊರಟು ಬಾರೆನ್ನುವ ಗಂಡನ ಮಾತು ಒಪ್ಪಿತವೆನಿಸುವುದಿಲ್ಲ. ಸ್ತ್ರೀಯು ಚಂಚಲೆಯೆಂಬುದು ಒಂದು ನಿರ್ಮಿತ. ಸಮುದಾಯಗಳನ್ನು ಕಾಯುವ ಹಾಗು ಸೃಷ್ಟಿ ಕಾರ್ಯವನ್ನು ಅಲಕ್ಷ್ಯ ಮಾಡುವುದು ಅವಳಿಗಾಗುವ ಅವಮಾನ. ತನ್ನ ಸಂಕಟ ನಿವಾರಣೆಗಾಗಿ ಅವಳು ಕುಲದೈವ ಮಾದೇಶ್ವರನನ್ನು ಮೊರೆ ಹೋಗುತ್ತಾಳೆ. ಅಖಂಡಮಹಿಮ ಜಗಕೆ ಸೂತ್ರಧಾರಿಯಾದ ಮಾದಪ್ಪನು ಅವಳಿಗೆ ಮಕ್ಕಳ ಫಲಸಹಿತವಾಗಿ ಸಕಲ ಭಾಗ್ಯವನ್ನೂ ನೀಡುತ್ತಾನೆ.

ಕಂದ ಸಂಕಮ್ಮ
ಮಕ್ಕಳ ಭಾಗ್ಯಕ್ಕೆ ಪಿಂಡ ಪ್ರಸಾದ ಕೊಡ್ತೀನಿ
ನಿನಗೆ ಮಕ್ಕಳಾಗ್ತಾವೆ ಕಂದ
ನಿನ್ನ ಗಂಡನಾದ ನೀಲೇಗೌಡ

ನಿನ್ನನ್ನು ದೊಡ್ಡಿಯೊಳಗೆ ಬಿಟ್ಟು ಹೋಗಿ ಆರು ತಿಂಗಳಾಗಿವೆ
ಗರ್ಭಿಣಿಯಾಗ್ತೀಯೆ ನನ್ನ ಕಂದ
ನಿನ್ನ ಗಂಡ ಬರೋಹೊತ್ತಿಗೆ
ನಿನ್ನ ಗಂಡಬಂದು ಕೇಳಿದರೆ
ಏನು ಜವಾಬು ಹೇಳುವೇ ॥ಕೋರಣ್ಯ॥
ಅಯ್ಯೋ ಗುರುವೇ ಗುರು ಪಾದವೇ
ನಿನ್ನ ಗಂಡ ನೀಲೇಗೌಡನಿಗೆ
ನಿಮ್ಮ ಹೆಸರೇಳ್ತೀನಿ ಗುರುವೆ
ನನ್ನಪ್ಪನ ಮನೆದೇವ್ರು
ಮಾದಪ್ಪ ಬಂದು ನನ್ನ ಕಷ್ಟ ಪರಿಹಾರ ಮಾಡಿ
ಬಡಸ್ತಾನ ಬಯಲು ಮಾಡಿ
ಸಿರಿಸ್ತಾನ ಉಂಟುಮಾಡಿ ಬಿಟ್ಟು
ಮಕ್ಕಳ ಭಾಗ್ಯ ಕೊಟ್ಟು ಹೊದ್ರು ಯಜಮಾನ
ಅಂತ್ಹೇಳಿ ನಿಮ್ಮ ಮೇಲೆ ಹೇಳ್ತೀನಿ ಗುರುವೇ ಅಂದಳು
ಸಭಾಷ್ ಕಂದ
ನಿನ್ನ ಗರ್ಭದಲ್ಲಿ ಎರಡು ಮಕ್ಕಳು ಹುಟ್ಟುತಾ ಇದಾವೆ

ಇಂಥಹ ಸಂಕಥನಗಳನ್ನು ಓದುವಾಗ ಗಮನಿಸಬೇಕಾದ ಅಂಶವೇನೆಂದರೆ ಇಂಥಹ ಸ್ವಾತಂತ್ರ ನೆಲೆಗಳು ಸ್ವೇಚ್ಛಾಚಾರಗಳಲ್ಲ, ಬದಲಿಗೆ ಸ್ವಂತಿಕೆಯನ್ನು ಗೌರವಿಸುವ, ಸಮುದಾಯಗಳನ್ನು ಕಾಯುವ ಹೊಣೆಗಾರಿಕೆಗಳು.

ಮದುವೆ, ಕುಟುಂಬ ಅದನ್ನು ಒಟ್ಟುಗೂಡಿಸುವ ಸೂತ್ರಗಳಂತಿರುವ ಪಾವಿತ್ರ್ಯತೆ, ಶೀಲ, ಲಜ್ಜೆ ಹಾಗು ಕುಟುಂಬ ಗೌರವಗಳೆಂಬ ಲಾಂಛನಗಳು/ಸಂಕೇತಗಳು ಲೈಂಗಿಕತೆಯ ಅಪವ್ಯಾಖ್ಯಾನಗಳು. ಇಂತಹ ಪ್ರಯತ್ನಗಳನ್ನು ನಿರ್ವಚನಗೊಳಿಸುವ ಈ ತತ್ವಪದವು ಪುರುಷನ ಅಹಂಕಾರವು ಹೇಗೆ ತನ್ನ ಅಧಿಕಾರವನ್ನು ಸ್ಥಾಪಿಸಿಕೊಳ್ಳಲು ಸ್ತ್ರೀ ದೇಹವನ್ನು, ಅದರ ಸಾಮರ್ಥ್ಯವನ್ನು ಮಿತಗೊಳಿಸಲು ಮುಟ್ಟು, ಮಡಿ, ಮೈಲಿಗೆಗಳ ಜೇಲಿಗಳನ್ನು ನಿರ್ಮಿಸಿ ಆ ಮೂಲಕ ಅವಳ ಆತ್ಮವಿಶ್ವಾಸವನ್ನು ಕುಂದಿಸುವ ಪ್ರಯತ್ನಗಳನ್ನು ಮಾಡುತ್ತವೆ ಎಂಬುದನ್ನು ಲೀಲಾಜಾಲವಾಗಿ ಪ್ರತಿಮೆಗಳ ಮೂಲಕ ಅಣಕ ಮಾಡುತ್ತದೆ. ಬಂಧಿಸುವ ಇಂತಹ ನಿರ್ಮಿತಗಳೆಲ್ಲವೂ ಸಹಜವಾದದ್ದೇನಲ್ಲ. ದೇಹವನ್ನು ಹಗುರ ಮಾಡಿಕೊಳ್ಳಲು ಆತ್ಮವಂಚನೆಯನ್ನು ಮೊದಲು ಬಿಡಬೇಕು ಎಂದು ಅರ್ಥೈಸುತ್ತದೆ. ಹೆಣ್ಣಿನ ದೇಹವೆಂಬುದು ಮೈಲಿಗೆಯ ಗೂಡಲ್ಲ. ದೇಹವನ್ನು ಅವಮಾನಿಸಿ ಅರಿಯುವುದು ಹಾಸ್ಯಾಸ್ಪದವೆಂದು ಕೆಳಗಿನ ತತ್ವಪದಕಾರನ ಅಭಿಮತ.

ಮುಡಚಟ್ಟಿನೊಳು ಬಂದು, ಮುಟ್ಟೇ ತಟ್ಟೇ ಎನುತೀರಿ
ಮುಡಚಟ್ಟು ಎಲ್ಯಾಡ್ಹೇಳಣ್ಣ
ಮುಟ್ಟಾದ ಮೂರು ದಿನಕೆ ಹುಟ್ಟಿ ಬಂದಿದಿ ನೀನು

ಮುಡಚಟ್ಟು ಎಲ್ಯಾದ್ವೇಳಣ್ಣಾ
ತೊಗಲೊಳು ತೊಗಲೊಕ್ಕು ತಗಲಿ ಬಂದವ ನೀಸು
ತಗಲ ಮಾತಾಡುವುದೇನಣ್ಣಾ
ಇದರ ಬಗೆಯ ತಿಳಿಯದೆ ವಗದು ಮಾತಾಡಿದರೆ
ನಗಿಗೇಡಿ ಕಾಣುತಾದಣ್ಣಾ
ಊರ ನರಕವ ತಿಂದು ಬೋರ್ಯಾಡ್ತಿಂಡುವ ಎಮ್ಮಿ
ಹಾಲಿನ ಸವಿ ನೋಡಣ್ಣಾ
ಅದರ ಸ್ವಾದ್ವತಿ ನೀ ಉಂಡು ಗಂಡಾಗಿ ಕುಂತೀದಿ
ಶೀಲ ಎಲ್ಲಿ ಉಳಿತ್ತೆಳಣ್ಣಾ
ಊರ ಬಾವಿಯ ನೀರು ದಾರಾದರು ತರುವರು
ನಿನ್ನ ನೀರ ಬ್ಯಾರ್ಯಾವೇನಣ್ಣಾ
ಲಂಡೇಸ್ಥಳ್ಳ ಬಂದು ನದಿಯ ಕೂಡಿದ ಮೇಲೆ
ನೈವೇದ್ಯ ಹೇಗಾದವು ಹೇಳಣ್ಣಾ
ಸೂಸಲಾಡುವ ದೇಹ ಸೋಸಿ ನೀರವ ಮಾಡಿ
ಮಡಿ ಮಾಡಿಕೊಳ್ಳಬೇಕಣ್ಣಾ
ನಮ್ಮ ಧೀರ ಮಹಾಂತೇಶನ ಬಿಡದೆ ಕೊಂಡಾಡಿದರೆ
ಕಡಿತನಕ ಮಡಿಯಾಗುವುದಣ್ಣಾ

– ಕಡಕೊಳಮಡಿವಾಳಪ್ಪ

ಹೆಣ್ಣಿನ ಫಲವಂತಿಕೆಯು ಇರುವುದು ಪುರುಷಾಧಿಕಾರಕ್ಕಾಗಿ ಅಲ್ಲ. ಬದಲಾಗಿ ಜೀವೋತ್ಪನ್ನಕ್ಕಾಗಿ. ಮಾನವ ನಿರ್ಮಿತ ಯುದ್ಧಗಳಿಂದ ಅವಳ ಸೃಷ್ಟಿಕಾರ್ಯಕ್ಕೆ ಭಂಗ ಬರುವುದಾದರೆ ಅವಳು ಸಮಾಜ ನಿರ್ಮಿತ 'ಗಂಡು' ಎಂಬ ಪುರುಷನಿಗಾಗಿ ಕಾಯದೆ, 'ಪಾತಿವ್ರತ್ಯ'ವನ್ನು ಧಿಕ್ಕರಿಸಬಲ್ಲಳು. ಸಮಾಜ ನಿರ್ಮಿತ ಸಂಸ್ಥೆಗಳ ಪ್ರತಿನಿಧಿಗಳನ್ನು, ಅತ್ತೆ, ಮಾವ, ಗಂಡ, ತನ್ನನ್ನೂ ಒಳಗೊಂಡಂತೆ ಎಲ್ಲರನ್ನೂ ಹಾಸ್ಯಾಸ್ಪದಗೊಳಿಸುವುದಲ್ಲದೆ, ಈ ಸಂಸ್ಥೆಗಳು ಕಾರ್ಯನಿರ್ವಹಿಸುವ ಬಗೆಯನ್ನು ಬಿಂಬಿಸುತ್ತಾಳೆ. ಸಾಮ್ರಾಜ್ಯಗಳನ್ನು ಕಟ್ಟಿ, ಅಧಿಕಾರದ ನೆರಳನ್ನು ಸ್ಥಾಪಿಸಬೇಕೆನ್ನುವ ಸಾಂಸ್ಕೃತಿಕ ಅಹಂಕಾರಕ್ಕೆ ಅವಳು ಹೇಳಬೇಕಾಗಿರುವುದು, ಗುಡ್ಡಕ್ಕೆ ನೆರಳಿಲ್ಲ ಎಂಬುದನ್ನಷ್ಟೆ.

ಕೋಲು ಕೋಲೆನ್ನಿರೇ....
ಕೋಲು ಕೋಲೆನ್ನಿರೇ । ಸದ್ಗುರುವಿನ
ಕೀಲು ಮೇಲೆನ್ನಿರೇ ।ಪ।

ಅತ್ತೆ ಹೆಸರು ಹಳೆಯ ಚಾಪೆ
ಮಾವನ ಹೆಸರು ಮಂಚದ ಕಾಲು
ಎನ್ನ ಹೆಸರು ಕಲ್ಲಿಬಿಲ್ಲಿ
ಗಂಡನ ಹೆಸರು ಟಕ್ಕಟಕ್ಕಿ ।೧।

ಹತ್ತಿ ಬಿತ್ತಿ ಬತ್ತ ಕಾಣೆ
ಬತ್ತ ಬಿತ್ತಿ ಬಾನ ಕಾಣೆ
ಮನೆಯ ತುಂಬ ಮಕ್ಕಳ ಹಡೆದು
ಗಂಡನ ಸುಖವ ಕಾಣಲಿಲ್ಲ ।೨।

ಗಂಡ ದಂಡಿಗೋಗುವಾಗ
ಅರಗಿನ ಮುದ್ರೆ ಮಾಡಿ ಹೋದ
ಅರಗಿನ ಮುದ್ರೆ ಹಾರು ಹೊಡೆದು
ಆರು ಮಕ್ಕಳ ಹಡೆದೆನವ್ವ ।೩।

ದಂಡಿಗೋಗೊ ಅಣ್ಣಗಳಿರಾ
ದಂಡಿಗೋಗೊ ಅಪ್ಪಗಳಿರಾ
ದಂಡಿನಾಗೆ ನನ್ನ ಗಂಡನ ಕಂಡರೆ
ಮಿಂಡನ ಕಟ್ಟಿಕೊಂಡು ಹೋದಳೆನ್ನಿ ।೪।

ಗುಡ್ಡಕ್ಕೆ ನೆರಳಿಲ್ಲ ಗುರುವಿಗೆ ಸಮನಿಲ್ಲ
ಸ್ವಾಮಿ ಚಿದಾನಂದನ ಮಹಿಮೆ ತಿಳೀಲಿಲ್ಲ ಕೋಲೆನ್ನಿರೇ...

## ಶ್ಯಾಮಲಾ ಬೆಳಗಾಂವಕರ ಸಣ್ಣಕತೆ ಕರುಳ ಕತ್ತರಿ

ಹೆಣ್ಣು ಗಂಭೀರವಾಗಿದ್ದೂ ತೆರೆದುಕೊಂಡಂತೆ ಇರಬಲ್ಲಳು, ಮಾತಾಡಬಲ್ಲಳು, ವ್ಯವಹರಿಸಬಲ್ಲಳು. ಅವಳ ಎಲ್ಲ ಆತ್ಮವಿಶ್ವಾಸವು ಕೇವಲ ವ್ಯಾವಹಾರಿಕ ಲೈಂಗಿಕ ಕ್ರಿಯೆಯಾಗಿ ಬದಲಾಗುತ್ತಿರುವುದು ಅಧಿಕಾರ ಕೇಂದ್ರಗಳು ಸ್ವಾಯತ್ತತೆಯ ದಮನಕ್ಕಾಗಿ ಉಪಯೋಗಿಸುತ್ತಿರುವ ಹತಾರುಗಳಿಂದ. ಪ್ರೀತಿ, ಪ್ರೇಮಗಳೆಂಬುದು ಜೀವನ ಸಂಬಂಧಕ್ಕೆ ಪ್ರೇರಕವಾಗಬಲ್ಲುದೆಂದು ಗುರುತಿಸಿರುವ ಅನೇಕ ತರಹದ ಭಾವುಕ ಸ್ಥಿತಿಗಳಲ್ಲಿ ಒಂದು ಮಾತ್ರ.. ಪ್ರೀತಿಯೂ ಕೂಡ ಭ್ರಷ್ಟವಾಗುತ್ತಿರುವುದು ಹಣದ ವ್ಯಾಮೋಹ ಸೃಷ್ಟಿಸಿರುವ ಸ್ಥಿತಿ. ಇದನ್ನು ಪ್ರತಿನಿಧಿಸುವ ಸಣ್ಣಕತೆ ಶ್ಯಾಮಲಾ ಬೆಳಗಾಂವಕರ ಅವರ ಕರುಳ ಕತ್ತರಿ. ಬದುಕಿನ ಎಲ್ಲ ಆಯ್ಕೆಗಳು ಮುಚ್ಚಿ ಹೋದ ಸನ್ನಿವೇಶದಲ್ಲಿ ಅಕಸ್ಮಾತ್ ಒದಗಿಬಂದ ಒಂದೇ ಒಂದು ಅವಕಾಶದಲ್ಲೂ ಹೆಣ್ಣೊಬ್ಬಳನ್ನು ಬಾಳಗೊಡದ ಹಣ-ಮೋಹದ ವ್ಯಾಪಾರಿ ಕ್ರೂರ ಜಗತ್ತನ್ನು ಈ ಕತೆ ಮನಮುಟ್ಟುವಂತೆ ತೆರೆದಿಡುತ್ತದೆ. ಸಣ್ಣವ್ವ ತನ್ನ ಮೂವರೂ ಹೆಣ್ಣು ಮಕ್ಕಳನ್ನು ಕ್ರೈಯಾರ ವೇಶ್ಯಾವೃತ್ತಿಗೆ ದೂಡಿದ್ದು ಅದೇ ಮಾಯೆಗ ಬಲಿಬಿದ್ದೇ. ಮೂವರಲ್ಲಿ ಒಬ್ಬಳು ಓಡಿ ಹೋದರೆ ಇನ್ನೊಬ್ಬಳು ಆತ್ಮಹತ್ಯೆ ದಾರಿ ಹಿಡಿಯುತ್ತಾಳೆ. ಕೊನೆಯವಳಾದ ಚಂದ್ರಮ್ಮ ತನ್ನಲ್ಲರಳಿದ ಸಂಗೀತ ಮತ್ತು

ಅಂತಃಕರಣದಿಂದಾಗಿ ನೆರೆಯೂರಿನ ವೆಂಕಣ್ಣನಾಯಕರ ಪ್ರೀತಿಗೆ ಒಲಿದು ಅವರ ಕುಟುಂಬ ಸೇರುತ್ತಾಳೆ. ಅಲ್ಲಿಗೂ ಹಿಂಬಾಲಿಸಿ ಹೋದ ಹಣ-ವ್ಯಾಮೋಹದ ಮಾಯೆ ಚಂದ್ರವ್ವನನ್ನು ಅಲ್ಲಿಂದ ಎಳೆತಂದು ಸರ್ವನಾಶ ಮಾಡಿಬಿಡುತ್ತದೆ. ತಂದೆ ಗದಿಗಪ್ಪನೇ ಚಂದ್ರವ್ವನನ್ನು ಕರೆತಂದು ಒಡವೆ ಹಣದ ಆಸೆಗಾಗಿ ತಂದೆ ತಾಯಿ ಇಬ್ಬರೂ ಅವಳಿಗೆ ದತ್ತೂರಿ ತಿನ್ನಿಸಿ ಹುಚ್ಚಿಯನ್ನಾಗಿಸುತ್ತಾರೆ. ಪ್ರಶ್ನಿಸಿದ ವೆಂಕಣ್ಣನಾಯಕರನ್ನು ತಪ್ಪಿತಸ್ಥರನ್ನಾಗಿಸಿ ಜೈಲಿಗೆ ಕಳಿಸುತ್ತಾರೆ. ಚಂದ್ರವ್ವ ಹುಚ್ಚಿಯಾಗಿ ಬೀದಿ ಅಲೆಯುವಂತಾಗುತ್ತದೆ. ಕಾರ್ಪೊರೇಟ್ ಜಗತ್ತಿನ ಕ್ರೌರ್ಯವು ಇದಕ್ಕಿಂತ ಭಿನ್ನವೇನಲ್ಲ. ಇಲ್ಲಿ ಎಲ್ಲವೂ ಮಾರಾಟವೇ. ಮುದ್ದಾದ ಹೆಣ್ಣುಮಕ್ಕಳು, ಅವರ ದೇಹ, ಅವರ ಸಂಗೀತ, ಕಡೆಗೆ ತಂದೆ ತಾಯಿ ತೋರಬಹುದಾದ ವಾತ್ಸಲ್ಯ ಕೂಡ. ಎಂತಹ ಕ್ರೂರ ಮೋಸವೂ ಇಲ್ಲಿ ಸಹ್ಯ. ಮಾರಾಟಕ್ಕಿಡದ ಒಲುಮೆ ಅಂತಃಕರಣಗಳನ್ನು ನಿರ್ದಯವಾಗಿ ಚಿವುಟಿ ಹಾಕುವ ಜಾಗತೀಕರಣದ ಮಾಯಾಜಗತ್ತು, ಶಿಕ್ಷಿಸಲೂ ಹಿಂಜರಿಯುವುದಿಲ್ಲ. ಪ್ರೀತಿ ಒಲುಮೆಗಳನ್ನು ಪೋಷಿಸುವುದರ ಮೂಲಕ ಸಂಬಂಧದ ಸಾಮರಸ್ಯವನ್ನು ಕಾಪಾಡಿಕೊಳ್ಳುವುದರ ಮೂಲಕ ಕಟ್ಟಿಕೊಳ್ಳುವ ಬದುಕು ಒಂದೆಡೆಯಾದರೆ ಸಂಬಂಧಗಳನ್ನು ನಿರ್ದಾಕ್ಷಿಣ್ಯವಾಗಿ ಛಿದ್ರಿಸಿ ಮಾರಾಟ ಮಾಡುವ ಜಗತ್ತು ಇನ್ನೊಂದೆಡೆ. ಎರಡರ ಮಾಯೆ ಬಲವಾದದ್ದು. ದುರಾಸೆ ಅಥವಾ ಸ್ವಾರ್ಥದ ಕೇಡು ಸ್ವತಂತ್ರ ಅಸ್ತಿತ್ವಗಳನ್ನು ಸಹಿಸುವುದಿಲ್ಲ. ಇಂತಹ ಕೇಡುಗಳಿಗೆ ಜಾಗತೀಕರಣದ ಸಂದರ್ಭದಲ್ಲಿ ಅವಕಾಶಗಳು ವಿಪುಲವಾಗಿರುತ್ತವೆ. ಲೈಂಗಿಕ ಅಪವ್ಯಯಕ್ಕೆ ದೇಹವನ್ನು ಅವಮಾನಿಸಿಕೊಳ್ಳಲು ಸಿದ್ಧಳಾಗಬೇಕಾದದ್ದು. ಹಣದ ದುರಾಸೆಯ ಅಧಿಕಾರದ ಎದುರು, ವ್ಯವಸ್ಥಿತವಾಗಿ ರೂಪುಗೊಂಡ ಅವರ ಹುನ್ನಾರದ ಎದುರು ತಲೆಬಾಗಲೇಬೇಕಾದ ಸ್ಥಿತಿ ನಿರ್ಮಾಣವಾಗುವ ಸನ್ನಿವೇಶವನ್ನು ಈ ಕಥೆ ಮನೋಜ್ಞವಾಗಿ ತೆರೆದಿಡುತ್ತದೆ. ಇಲ್ಲಿನ ಅಧಿಕಾರ ಕೇಂದ್ರಗಳು ಸೌಮ್ಯ ಮುಖವನ್ನು ಹೊಂದಿವೆ. ಪುರುಷ ಪ್ರತಿನಿಧಿಯಾದ ವೆಂಕಣ್ಣನಾಯಕ ಅಸಹಾಯಕ ಬಲಿಪಶುವಿನಂತೆ ಕಾಣಿಸುತ್ತಾನೆ. ಲೈಂಗಿಕತೆಯು ಹೆಣ್ಣೊಬ್ಬಳು ಹಣಗಳಿಸುವ ಮಾರ್ಗವಾಗಿ ರೂಪಗೊಂಡಾಗ ಹೇಗೆ ಭ್ರಷ್ಟವಾಗುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಅವಳು ಇಲ್ಲೊಂದು ವ್ಯಾಪಾರಕ್ಕೆ ಸಿದ್ಧವಾಗಿರುವ ಸರಕಷ್ಟೆ. ವೇಶ್ಯೆಯಾಗುವ ಅವಮಾನಕ್ಕಿಂತ ಕ್ರೂರವಾಗಿ ಈ ಕತೆ ಹೇಳುವುದು ಅವಳ ದೇಹ ತಮಗೆ ಹಣದ ಮೂಲವಾಗಲಿಲ್ಲ ಎಂಬ ಚಂದ್ರಿಯ ತಂದೆ ತಾಯಿಯರ ದುರಾಸೆ ಮತ್ತು ಆ ಪರಿಣಾಮವಾಗಿ ಅವಳಿಗೆ ಅವರು ಒಡ್ಡುವ ದುರ್ದೆಸೆ. ಈ ಇಡೀ ಕತೆ ಸೂಚಿಸುವುದಿಷ್ಟೆ. ಹೆಣ್ಣೊಬ್ಬಳು ತಾವು ಹೇಳಿದಂತೆ ವರ್ತಿಸಿದರೆ ಮಾತ್ರವೇ ಅವಳ ಲೈಂಗಿಕತೆಯು ಮಾನ್ಯ ಇಲ್ಲವಾದರೆ ಅದೊಂದು ಅಪರಾಧ. ಹಣ/ಅಧಿಕಾರ ಅಹಂನ್ನು ಪೋಷಿಸಲು ಪಾವಿತ್ರ್ಯ, ಕುಲಗೌರವ ಮುಂತಾದ ಸಂಕೇತಗಳು ಸಹಾಯಕಗಳಷ್ಟೆ ಹೊರತು ಸ್ವಾಯತ್ತತೆಯನ್ನು

ಎಂದೂ ರಕ್ಷಿಸಲಾರವು. ಈ ಎಲ್ಲ ಸಂಕೇತಗಳು, ಅಧಿಕಾರ ಕೇಂದ್ರಗಳು ಹೆಣ್ಣನ್ನು ತಮಗೆ ಬೇಕಾದಂತೆ ರೂಪಿಸಲು ಇರುವ ನೆಪಗಳಷ್ಟೆ. ಈ ಕತೆಯನ್ನು ಓದುವಾಗ ಇರಬೇಕಾದ ಎಚ್ಚರ ಏನೆಂದರೆ ಹಣದ ಮಾಯೆ ಸಂಬಂಧಗಳ, ವಾತ್ಸಲ್ಯಗಳೆಲ್ಲವನ್ನೂ ಮೀರಿ ವ್ಯಕ್ತಿಯನ್ನು ಭ್ರಷ್ಟಗೊಳಿಸುತ್ತದೆ/ಲೈಂಗಿಕತೆಯನ್ನೂ ಕೂಡ. ಇಂತಹ ಜಾಗತೀಕರಣದ ಹುನ್ನಾರಗಳು ಸಂಪ್ರದಾಯದ ಮುಖವಾಡ ಧರಿಸಿ ಹೆಣ್ಣಿನ ತನವನ್ನು ಕಾಪಾಡುತ್ತದೆ ಎಂಬ ಕಪಟ ಸ್ವಾಯತ್ತತೆಯ ಲಕ್ಷಣಗಳನ್ನು ಹೊಂದಿರುತ್ತವೆ.

**ಉಪಸಂಹಾರ:**

ನನ್ನ ನಗ್ನತೆಯು ಕೋಟಿ ಕೋಟಿ ಗಳಿಸಿಕೊಡಬಲ್ಲದು. ಆದರೆ ಅಂತಹ ಪ್ರತಿನಿಧೀಕರಣ ನನ್ನಂತಹ ಕೋಟಿ ಕೋಟಿ ಅಕ್ಕ ತಂಗಿಯರ ದೇಹವು ಪುರುಷನ ಲೈಂಗಿಕ ದಾಹದ ಕಣ್ಣುಗಳಿಗೆ ಬಲಿಯಾಗಿಸುವಂತಾಗಬಾರದು. ತರಕಾರಿ ಮಾರುವ, ಗಾರ್ಮೆಂಟ್‌ಗಳಲ್ಲಿ ಕೆಲಸ ಮಾಡುವ, ಬೀದಿ ಗುಡಿಸುವ, ಶಾಲೆಗೆ ಹೋಗುವ ಕ್ರೀಡೆಗಳಲ್ಲಿ ಭಾಗವಹಿಸುವ ಹೆಣ್ಣು ಮಕ್ಕಳ ದೇಹಗಳು ತಮ್ಮೆಲ್ಲ ಚೇತನದೊಂದಿಗೆ ಆತ್ಮವಿಶ್ವಾಸದಿಂದ ಕಾರ್ಯನಿರ್ವಹಿಸುವಲ್ಲಿ, ಮಾಧ್ಯಮ ಸೃಷ್ಟಿಸುವ ಅರೆನಗ್ನ ರೂಪವು ಮಾತ್ರವೇ ಕಣ್ಣ ಮುಂದೆ ಬರಬಹುದಾದರೆ ಜಾಗತೀಕರಣವು ಅತಿರಂಜನೀಯವಾಗಿ ಅವಳನ್ನು ಅವಳ ಭ್ರಷ್ಟಗೊಂಡ ಲೈಂಗಿಕತೆಯ ಮೂಲಕ ಮಾತ್ರವೇ ನೋಡಲುಬಯಸುತ್ತದೆ ಎಂದು ತಿಳಿಯಬಹುದಲ್ಲವೆ? ಹಣದ ಧಿಮಾಕಿನ ಮುಂದೆ ಮಹಿಳಾ ಸ್ವಾಯತ್ತಶಕ್ತಿಯು ಯಾವತ್ತೂ ಮುರುಟಿಲ್ಲ. ನಾವು ಸಾಕಾರಗೊಳ್ಳುವುದು ಸಾಧನೆಯೆಡೆಗೆ ಸಾಗಬಹುದಾದದ್ದು ನಮ್ಮ ದೇಹಗಳಿಂದ ಮಾತ್ರವೇ ಸಾಧ್ಯ. ಮಹಿಳೆಯ ಭಾವನೆಗಳನ್ನು ಅಧಿಕಾರದ ಭಾಷೆ ಅನ್ವಯಿಸಿಕೊಳ್ಳದಿದ್ದರೂ ಶ್ರಮದಿಂದಾದರೂ ಸರಿಯೆ ಪ್ರಚಲಿತ ಭಾಷೆಯನ್ನು ಹೊಂದಿಸಿಕೊಂಡು ಮುನ್ನಡೆಯುವುದು ಅಗತ್ಯವಿದೆ. ಆದರೆ ನಗ್ನತೆಯ ವೈಭವೀಕರಣವಾಗಲೀ, ಅಬಲತೆಯ ಶೋಷಣೆಯಾಗಲೀ ಮಹಿಳಾ ಅಭಿವೃದ್ಧಿಯ ಮಾರ್ಗಗಳಾಗಲಾರವು. ಅಭಿವೃದ್ಧಿಯೆಂಬುದು ಪ್ರಶ್ನಿಸಲ್ಪಡುತ್ತಿರುವುದು ಇದೇ ನೆಲೆಯಲ್ಲಿ. ತಾಯ್ತನದ ಹೃದಯಕ್ಕೆ ಮಾತ್ರವೇ ಅಭಿವೃದ್ಧಿಯ ಸಂಕೇತವಾದ ನರ್ಮದಾ ನದಿಗೆ ಕಟ್ಟಲಾಗುತ್ತಿರುವ ಅಣೆಕಟ್ಟು ಯೋಜನೆಗಳು ಕಿರು ನೀರಾವರಿ ಯೋಜನೆಗಳಿಗೆ ಹೇಗೆ ಮಾರಕವಾಗಬಲ್ಲವು, ತನ್ಮೂಲಕ ಅವುಗಳನ್ನು ಅವಲಂಬಿಸಿರುವ ಕೋಟ್ಯಂತರ ಜೀವಿಗಳ/ವ್ಯವಸ್ಥೆಯ ಅಸ್ತಿತ್ವ ಹರಣ ಮಾಡಬಲ್ಲವು ಎಂಬ ಅರಿವಿರಲು ಸಾಧ್ಯ. ಯಾಕೆಂದರೆ ಅಂತಹ ಜೀವಿಗಳ ಉಳಿವು ಸಾವಯವ ಸಂಬಂಧಗಳ ಉಳಿವು. ಜ್ಞಾನವನ್ನು, ಕೌಶಲಗಳನ್ನು, ಅವಕಾಶಗಳನ್ನು ಹಣಕ್ಕೆ ರೂಪಾಂತರಿಸುವುದು ಜಾಗತೀಕರಣಕ್ಕೆ ಆವಶ್ಯಕ ಮತ್ತು ಅನಿವಾರ್ಯ. ಹಣದ ರೂಪಕ್ಕೆ ಸಂಕೇತಕ್ಕೆ ಬಲಿಗೊಳ್ಳದಿರುವ ಸಾವಿರಾರು ದೃಷ್ಟಿಕೋನಗಳು, ಬದುಕುವ ವಿಧಾನಗಳನ್ನು ಉಳಿಸಿ

ಬೆಳೆಸಿಕೊಂಡ ಪರಂಪರೆಗಳನ್ನು ಅವಸಾನದ ಅಂಚಿಗೆ ತಂದಿರುವುದು ಜಾಗತೀಕರಣಕ್ಕೆ ಸೌಭಾಗ್ಯ ಮತ್ತು ಅದರ ಹೆಗ್ಗಳಿಕೆ. ವಿನ್ಯಾಸಗಳ,ಸಂಸ್ಕೃತಿ-ಆಚಾರ-ವಿಚಾರಗಳ ವಿನಿಮಯ ಸಂಭ್ರಮದ ಸಂಗತಿಗಳೇ. ಆದರೆ ವೈವಿಧ್ಯತೆಯನ್ನು, ಅದು ಇರುವ ಹಾಗೆಯೇ ಉಳಿಸಬೇಕಾದದ್ದು ನಮ್ಮ ಜವಾಬ್ದಾರಿ. ಜಾಗತೀಕರಣವೆಂಬ ಬೆಳಕು ತನ್ನ ಗರ್ಭದಲ್ಲಿ ಭೀಕರವಾದ ಕತ್ತಲನ್ನು ಇರಿಸಿಕೊಂಡಿದೆ. ತನ್ನ ಅಧಿಕಾರದ ಪ್ರಾಬಲ್ಯದಿಂದ ಜಾಗತೀಕರಣವು ನಮ್ಮ ಆಹಾರ ಪದ್ಧತಿಯಲ್ಲಿ ಗಮನಾರ್ಹ ಬದಲಾವಣೆಯನ್ನು ತಂದಿದೆ. ನಮ್ಮ ಜೀವನ ಶೈಲಿಯನ್ನು ತನಗೆ ಬೇಕಾದ ಹಾಗೆ ನಿರ್ದೇಶಿಸುತ್ತದೆ. ಇಂದು ಪ್ರಮುಖ ಕಾಯಿಲೆಗಳೆಂದು ಗುರುತಿಸಲ್ಪಡುವ ಮಧುಮೇಹ, ಕೊಲೆಸ್ಟರಾಲ್ ಮತ್ತು ಹೃದಯಾಘಾತ ಬಂದಿರುವುದು ನಮ್ಮ ಜೀವನ ಶೈಲಿಯ ವ್ಯತ್ಯಾಸದಿಂದ. ಔಷಧ ಕಂಪನಿಗಳಿಗೆ ನಮ್ಮ ದೇಹವು ಪ್ರಯೋಗಶಾಲೆಯಾಗಿದೆ ಮತ್ತು ಅಸಾಧ್ಯ ಹಣದ ಹರಿವಿನ ಮೂಲಗಳಾಗಿವೆ. ಜೀರೋ ಸೈಜ್ ನಿರ್ವಹಣೆ ಮತ್ತು ನಲವತ್ತರ ನಂತರದ ಹೆಣ್ಣಿನ ದೇಹ ಅಸಹನೀಯ ಎಂಬಂತಹ ಮಿಥ್‌ಗಳನ್ನು ಬಲವಂತವಾಗಿ ಬಿತ್ತಿಸಲಾಗುತ್ತಿದೆ. ದುರಾಸೆ ಹಾಗು ಸ್ವಾರ್ಥಗಳು ಸಮುದಾಯಗಳನ್ನು ಭ್ರಷ್ಟಗೊಳಿಸಿ ಬದುಕನ್ನು ಅಸಹನೀಯವಾಗಿಸುತ್ತವೆ.

ಭಾರತದ ಜ್ಞಾನ ಶಾಖೆಗಳು, ವಿಜ್ಞಾನ, ವೈದ್ಯಕೀಯ, ತಂತ್ರಜ್ಞಾನದ ಆವಿಷ್ಕಾರಗಳು, ಕಾನೂನುಗಳು, ಜೀವಿಗಳು ಹಾಗು ಜೀವ ಸಂಪನ್ಮೂಲಗಳನ್ನು, ಇಲ್ಲಿನ ನೆಲದ, ಪರಿಸರದ ಹುಮುಗನ್ನು/ಅದರ ಸ್ಥಿತಿಯನ್ನು, ಅರಿತು ಅದಕ್ಕೆ ಪೂರಕವಾಗುವಂತಹ, ಜೀವ ನೆಲೆಯನ್ನು ಇಲ್ಲಿ ಜೀವಿಸುವ ಎಲ್ಲರ/ಎಲ್ಲದರ ಎದೆಗೆ ಹತ್ತಿರವಾಗುವಂತೆ ತೊಡಗಿಸಿಕೊಳ್ಳುವುದು ಮಾತ್ರವೇ ಜಾಗತೀಕರಣದ ಸವಾಲನ್ನು ಸಮರ್ಥವಾಗಿ ದಾಟಿಸಬಲ್ಲದು.

ಇದೇ ಸ್ತ್ರೀ ಧರ್ಮವು, ಸಹಜವು, ಅನಿಕೇತನವು.



# ತಳವರ್ಗದ ವಚನಕಾರ್ತಿಯರ ಭಾಷೆ ಮತ್ತು ರೂಪಕಗಳು

-ಡಾ. ಶಶಿಕಲಾ ಮೊರಬದ

ವರ್ತಮಾನದ ಮನಸ್ಸೊಂದು ತನ್ನ ಕಾಲದ ಅಗತ್ಯ. ಸಾಂಸ್ಕೃತಿಕ ಒತ್ತಡ ಮತ್ತು ಸಂಘರ್ಷಗಳಿಗೆ ಅನುಗುಣವಾಗಿ ತನ್ನ ಓದನ್ನು ರೂಪಿಸಿಕೊಳ್ಳುತ್ತಿರುವ ಕ್ರಮ ಇಂದಿನದು. ಒಂದು ಸಾಹಿತ್ಯಿಕ "ಪಠ್ಯಕ್ಕೆ ಒಂದು ಕೇಂದ್ರ ಎನ್ನುವುದು ಇರುವುದಿಲ್ಲ. ಅದನ್ನು ಬಹುಕೇಂದ್ರಿಯವಾಗಿ ಗ್ರಹಿಸಬೇಕಾಗುತ್ತದೆ".[1] ಹಾಗಾದಾಗ ಮಾತ್ರ ಪಳೆಯ ಪಠ್ಯಗಳಿಗಿರುವ ಸ್ಥಾಪಿತ ನಿಲುವುಗಳು ಬದಲಾಗಿ ಬಹುಸ್ತರೀಯ ಧ್ವನಿಗಳು ಮತ್ತು ಓದುಗಳು ಸೃಷ್ಟಿಯಾಗುವುದರ ಜೊತೆಗೆನೇ, ಅಲಕ್ಷಿತ ಧ್ವನಿಗಳು ಮುಂಚೂಣಿಗೆ ಬರುವುದು ಸಾಧ್ಯವಾಗುವುದು.

ವಚನ ಚಳುವಳಿ ೧೨ನೆಯ ಶತಮಾನದಲ್ಲಿ ವೈದಿಕ ಪರಂಪರೆಯ ಮೌಢ್ಯಗಳನ್ನು ತಿರಸ್ಕರಿಸುವುದರ ಜೊತೆಗೆ, ಅವೈದಿಕ ಪರಂಪರೆಯನ್ನು ಎತ್ತಿ ಹಿಡಿಯುವ ಪ್ರಯತ್ನವನ್ನು ಮಾಡಿತು. ಅಂದು ಈ ಚಳುವಳಿ ಭಕ್ತರಾದ ಎಲ್ಲರಿಗೆ ಜಾಲಿ-ಲಿಂಗಗಳ ತರತಮಭಾವವಿಲ್ಲದ ಒಂದು ಮುಕ್ತತೆಯ ಅವಕಾಶವನ್ನು ಒದಗಿಸಿಕೊಟ್ಟಿತು. ಆ ಮುಕ್ತತೆ ಹೆಣ್ಣಿನ ಅಸ್ತಿತ್ವವನ್ನು ಕಂಡುಕೊಳ್ಳಲು ಸಾಧ್ಯಮಾಡಿತೇ? "ಗ್ರಹಿಕೆ ಮತ್ತು ಸಂವೇದನೆಗಳಲ್ಲಿ ವಚನಕಾರರು ಹೊಸ ಹೆಣ್ಣನ್ನು ಗುರುತಿಸಿದ್ದರೇ? ಎನ್ನುವುದು"[2] ಮುಖ್ಯವಾಗುತ್ತದೆ. ಈ

ಪ್ರಶ್ನೆಗಳ ಹಿನ್ನೆಲೆಯಲ್ಲಿ ಕೆಳವರ್ಗದ ವಚನಕಾರ್ತಿಯರ ಅಭಿವ್ಯಕ್ತಿಯನ್ನು "ಮಹಿಳೆಯರ ಅಸ್ತಿತ್ವ ಶೋಧಕ ಒಂದು ಪರಿಕರವಾಗಿ ರೂಪಿಸಿಕೊಳ್ಳಲಾದ ಸ್ತ್ರೀವಾದಿ ಚಿಂತನಾ ವಿಧಾನದ" ಓದಿನ ಮೂಲಕ ಗ್ರಹಿಸುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ.

ದಾಖಲಿತ ೩೩ ವಚನಕಾರ್ತಿಯರಲ್ಲಿ ಹೆಚ್ಚಿನವರು ಕೆಳವರ್ಗದ ಬಂದವರು. ಪುರುಷ ಪ್ರಧಾನ ಸಾಮಾಜಿಕ ಸಂರಚನೆಯಡಿಯಲ್ಲಿ ಮಹಿಳೆ ಎಂದಿಗೂ ದ್ವಿತೀಯ ದರ್ಜೆಯವಳೇ. ಜಾತಿ ಶ್ರೇಣಿಯಲ್ಲಿ ಅತ್ಯಂತ ತಳಭಾಗದಲ್ಲಿರುವವಳೂ ಅವಳೇ. ಅಂಥ ಶ್ರೇಣಿಕರಣ ವ್ಯವಸ್ಥೆಯಲ್ಲೂ, ದೊರಕಿದ ಅವಕಾಶವನ್ನು ತನ್ನದನ್ನಾಗಿಸಿಕೊಂಡು ತನಗೆ ದಕ್ಕಿದ ಬದುಕನ್ನು ಅವಳು ಅವಳ ಪ್ರತ್ಯಗಳಲ್ಲಿ ಹೇಗೆ ಅಭಿವ್ಯಕ್ತಿಸಿದ್ದಾಳೆ ಎಂಬ ಪಠ್ಯಕೇಂದ್ರಿತ ನೇರಕ್ರಮ ಈ ಲೇಖನದ್ದು. ಈ ಮೂಲಕ ಕೆಳ ವರ್ಗದ ಹೆಣ್ಣಿನ ಬದುಕಿನ ಆಯಾಮದ ಬಗ್ಗೆ ಆ ವರ್ಗದ ಬದುಕಿನ ಬಗ್ಗೆ ಹೊಸತೇನಾದರೂ ತಿಳುವಳಿಕೆ ಸಿಕ್ಕೀತೆ ಎನ್ನುವ ಹುಡುಕಾಟವೂ ಇಲ್ಲಿದೆ.

ಭಾಷೆ ಎದೆಯ ಭಾವಕ್ಕೆ ಒಂದು ಸಾಧನ. ಅದರಲ್ಲಿ ಬಳಕೆಯಾಗುವ ಅನೇಕ ಆಕರಗಳಲ್ಲಿ ಒಂದಾದ ರೂಪಕ ಪ್ರತಿಭೆಯ ಕೆಲಸ. ನೂರು ಮಾತುಗಳಿಗಿಂತ, ಹಸಿ ಗೋಡೆಯಲ್ಲಿ ಹರಳೊತ್ತಿದಂತೆ ರೂಪಕ ನಿಂತುಬಿಡುತ್ತದೆ. ರಚನೆಕಾರರು ಸಾಧ್ಯತೆ, ಸಾಮರ್ಥ್ಯಗಳೆರಡಕ್ಕೂ ಪಠ್ಯದಲ್ಲಿ ಬರುವ ರೂಪಕಗಳು ಸಾಕ್ಷಿಗಳು, ನಿಜ, ಆದರೆ ಮಹಿಳೆಯ ಭಾಷಾ ಅಭಿವ್ಯಕ್ತಿಯನ್ನು ಕುರಿತು ಮಾತನಾಡುವಾಗ ನಮ್ಮ ಸಾಮಾಜಿಕ ಸಂರಚನೆಯಡಿಯಲ್ಲಿ ಹೆಣ್ಣಿನ ಭಾಷೆಯ ನೆಲೆಯನ್ನು ಗುರ್ತಿಸಿಕೊಳ್ಳುವುದು ಮುಖ್ಯವಾಗುತ್ತದೆ. ಭಾಷಾ ವಿಜ್ಞಾನಿಗಳು ಗುರುತಿಸಿರುವಂತೆ ಗಂಡು ಹೆಣ್ಣಿನ ಭಾಷಿಕ ನೆಲೆಗಳು ಮೂರು ರೂಪದಲ್ಲಿರುತ್ತವೆ.

೧. ಕೃರ್ತವಿನ ನೆಲೆಯಲ್ಲಿರುವ ಗಂಡು ಕೊಡುವವನಾಗಿರುತ್ತಾನೆ. ಆತನದು ಉತ್ಪಾದಕ ನೆಲೆ. ಹೆಣ್ಣು ಬಳಕೆದಾರಳು ಅವಳ ನೆಲೆ ಪಡೆದುಕೊಳ್ಳುವುದಷ್ಟೆ ಆಗಿರುತ್ತದೆ.

೨. ಹೆಣ್ಣಿನ ಇನ್ನೊಂದು ನೆಲೆ ಕೊಟ್ಟದ್ದನ್ನು ರಕ್ಷಿಸುವ, ಕಾಪಾಡುವ ಮತ್ತೆ ಮರಳಿ ಕೊಡುವ ಹೊಣೆಯ ರೀತಿಯದಾಗಿರುತ್ತದೆ.

೩. ಹೆಣ್ಣಿನ ಇನ್ನೊಂದು ಭಾಷಿಕ ಮಾದರಿ ನಕಲಿಸುವ ಗುಣದ್ದಾಗಿರುತ್ತದೆ.

ಪುರುಷನಿಂದ ನಿರ್ಮಿತವಾದ ಭಾಷೆಯಲ್ಲಿನ ಗಂಡು-ಹೆಣ್ಣಿನ ನೆಲೆಗಳು. ಸಹಜವಾಗಿಯೇ ಗಂಡು ಮತ್ತು ಹೆಣ್ಣಿನ ಭಾಷೆಗಳ ಬಳಕೆಯ ನಡುವೆ ತರತಮ್ಯ ಭಾವವಿರುವುದನ್ನು ಸೂಚಿಸುತ್ತದೆ. ಈ ತರತಮ್ಯ ಭಾವವೇ ಅವರ ಅಭಿವ್ಯಕ್ತಿಯ ನೆಲೆಯಲ್ಲೂ ಪ್ರಕಟಗೊಳ್ಳುತ್ತದೆ.

ಗಂಡಿನ ಭಾಷೆಗಿಲ್ಲದ ಸಾಮಾಜಿಕ ಒತ್ತಡವೊಂದು ಹೆಣ್ಣಿನ ಭಾಷೆಗೆ ಇರುತ್ತದೆ. ಸಾಹಿತ್ಯದಲ್ಲೂ ಲಿಂಗರಾಜಕಾರಣ ಸ್ಥಾಪಿತವಾಗಿ ಬಿಡುತ್ತದೆ. ಅವಳ ಭಾಷೆ ಮತ್ತು ರೂಪಕಗಳು ನಿರಾಳತೆಯ ನೆಲೆಯಲ್ಲಿ ಹುಟ್ಟಿಕೊಳ್ಳುವುದಿಲ್ಲ. ಈ ಹಿನ್ನೆಲೆಯಲ್ಲಿಯೇ ವಚನಕಾರ್ತಿಯರ ಅಭಿವ್ಯಕ್ತಿಯಾದ ವಚನಗಳನ್ನು ಗಮನಿಸಿದಾಗ "ವಚನಕಾರ್ತಿಯರಲ್ಲಿ ವಿವಿಧ ಸ್ತರಗಳಿಂದ (ಮೇಲಿನವರ್ಗ, ಮಧ್ಯಮವರ್ಗ, ಕೆಳವರ್ಗ) ಬಂದ ಸ್ತ್ರೀಯರು ಸಮಾವೇಶಗೊಂಡಿದ್ದಾರೆ. ಆದರೆ ಅವರು ತಮ್ಮ ಪೂರ್ವಾಶ್ರಮದ ಜಾತಿಭೇದ, ಅಂತರ-ಅಂತಸ್ತುಗಳನ್ನು ಮರೆತು ಶರಣರು ನಿರ್ಮಿಸಿದ ಭೇದರಹಿತ ಸರ್ವಸಮಾನ ಮಾನವ ಧರ್ಮದ ವೇದಿಕೆಯ ಮೇಲೆ ಒಂದಾಗಿ ಬೆರೆತು ಕೌಟುಂಬಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ಆಧ್ಯಾತ್ಮಿಕ, ಅನುಭಾವಿಕ ಎಲ್ಲ ಹಂತಗಳಲ್ಲಿ ತಮ್ಮ ಚಿಂತನೆಗಳನ್ನು ಪರಸ್ಪರ ಹಂಚಿಕೊಂಡು ಬದುಕಿದ್ದಾರೆ.

ವರ್ಗ, ವರ್ಣಭೇದದಂತೆ ಲಿಂಗಭೇದವನ್ನೂ ಒಪ್ಪದ ಅವರು ಶರಣರ ಸ್ತ್ರೀ-ಪುರುಷ ಸಮಾನತೆಯ ಘೋಷಣೆಯಲ್ಲಿ ತಮ್ಮ ಧ್ವನಿಯನ್ನೂ ಕೂಡಿಸಿ, ಅದನ್ನು ಅರ್ಥಪೂರ್ಣವಾಗಿ ಆಚರಣೆಯಲ್ಲಿ ತಂದು ಜೀವನ ಸಾರ್ಥಕಪಡಿಸಿಕೊಂಡಿದ್ದಾರೆ"[೪] ಎಂಬ ಮಾತುಗಳನ್ನು ಸಂಭ್ರಮಿಸುವುದಕ್ಕಾಗುವುದಿಲ್ಲ.

ಸಂಖ್ಯಾ ದೃಷ್ಟಿಯಿಂದ ಕೆಳವರ್ಗದ ವಚನಕಾರ್ತಿಯರ ವಚನಗಳನ್ನು ಗಮನಿಸಿದಾಗ, ಅವು ಒಂದು, ಎರಡು ವಚನಗಳಿಂದ ಹಿಡಿದು ಅಕ್ಕಮ್ಮ, ಅಮುಗೆರಾಯಮ್ಮ ಹಡಪದಪ್ಪಣ್ಣಗಳ ಪುಣ್ಯಸ್ತ್ರೀ ಲಿಂಗಮ್ಮ ಇವರುಗಳು ರಚಿಸಿದ ಬಹುಸಂಖ್ಯೆಯ ರಚನೆಗಳವರೆಗೂ ಇರುವುದನ್ನು ಗಮನಿಸಬಹುದು. ವಚನಕಾರ್ತಿಯರ ವಚನಗಳನ್ನು ಗಮನಿಸುತ್ತಾ ಹೋದಂತೆ ಕೆಲವಂಶಗಳನ್ನು ಸಾಮಾನ್ಯವಾಗಿ ಹೆಚ್ಚಿನೆಲ್ಲಾ ವಚನಗಳಲ್ಲಿ ಗುರುತಿಸಬಹುದು.

೧) ವ್ರತದ ಬಗೆಗಿನ ಅತೀವ ನಿಷ್ಠೆ

೨) ವ್ರತಹೀನರ ಬಗ್ಗೆ ತೀವ್ರ ವಿರೋಧ

೩) ಇತರ

ಮೇಲಿನೆಲ್ಲಾ ಅಂಶಗಳು ಮೇಲ್ವರ್ಗದ ವಚನಕಾರ್ತಿಯರಲ್ಲಿ ಪ್ರಕಟಗೊಂಡರೂ, ಅವು ಇಲ್ಲಿನ ಪ್ರಖರತೆಯನ್ನು ಹೊಂದಿಲ್ಲದಿರುವುದು ಮುಖ್ಯ ಅಂಶ. ತಮ್ಮ ಜಾತಿ. ಅಂತಸ್ತು ಕೌಟುಂಬಿಕ ಸಂರಚನೆಗಳೊಳಗೆ ನಿಂತು ಮಾತನಾಡುವ ಈ ವಚನಕಾರ್ತಿಯರ ಭಾಷೆ ಮತ್ತು ರೂಪಕಗಳು ಈ ಸಂದರ್ಭದಲ್ಲೇ ಭಿನ್ನವಾಗುತ್ತವೆ ಮತ್ತು ತೀವ್ರ ಭಾವಾಭಿವ್ಯಕ್ತಿಯನ್ನು ಪಡೆದುಕೊಳ್ಳುತ್ತವೆ.

ಕಾಗೆಯು ನಾಯ ತಿಂದವರಿಲ್ಲ
ವ್ರತ ಭ್ರಷ್ಟನ ನಾರಂಗವಕ್ಕುವದೆ
ಲೋಕದ ನಾರಂಗೆ ವ್ರತವಕ್ಕುವದೆ ಶಿವಜೋಕಲ್ಲದೆ.
ಎಡೆಮಠದ ನಾಗಿದೇವಯ್ಯಗಳ ಪುಣ್ಯಸ್ತ್ರೀ
ಕೈಯಲ್ಲಿ ಕನ್ನಡಿಯಿರಲು ತನ್ನ ತಾ ನೋಡಬಾರದೆ?
ಲಿಂಗಜಂಗಮದ ಪ್ರಸಾದಕ್ಕೆ ತಪ್ಪಿದಲ್ಲಿ ಕೊಲ್ಲಬಾರದೆ?
ಕೊಂದೆಡೆ ಮುಕ್ತಿಯಲ್ಲಿವೆಂಬುದರ ಬಾಯಲ್ಲಿ
ಪಡಿಹಾರನ ಪಾದರಕ್ಷೆಯನಿಕ್ಕುವೆ.
ಮುಂಡಿಗೆಯನ್ನೆತ್ತಿರೋ ಭ್ರಷ್ಟ ಭವಿಗಳಿರಾ..
ಎತ್ತಲಾರದಡೆ ಸತ್ತ ಕುನ್ನಿ, ನಾಯ ಬಾಲವ,
ನಾಲಿಗೆ ಮುರುಟಿರೋ ಸದ್ಗುರು ಸಂಗ ನಿರಂಗಲಿಂಗದಲ್ಲಿ.

–ಕನ್ನಡಿ ಕಾಯಕದರೇಮಮ್ಮನ ವಚನ

ಎನ್ನ ಕರಣಂಗಳ ಲಿಂಗದಲ್ಲಿ ಕಟ್ಟುವೆ
ಗುರುಲಿಂಗ ಜಂಗಮದ ಕಾಲ ಕಟ್ಟುವೆ
ವ್ರತ ಭ್ರಷ್ಟರ ನಿಟ್ಟೊರಸುವೆ
ಸುಟ್ಟು ತುರುತರನೇ ತೂರವೆ

– ಕಾಲಕಣ್ಣಿಯ ಕಾಮಮ್ಮ

ವ್ರತಭ್ರಷ್ಟನ ಲಿಂಗಬಾಹ್ಯನ ಕಂಡಡೆ
ಸತ್ತ ನಾಯ, ಕಾಗೆಯ ಕಂಡಂತೆ
ಅವರೊಡನೆ ನುಡಿಯಲಾಗದು ಘೀಮೋಕ್ಷರಾ

– ಸಿದ್ಧಬುದ್ಧಯ್ಯಗಳ ಪುಣ್ಯಸ್ತ್ರೀ ಕಾಳವ್ವೆ

ಬಂಜೆಯಾವಿಂಗೆ ಕ್ಷೀರವುಂಟೆ?
ವ್ರತಹೀನನ ಬೆರೆಯಲುಂಟೆ?
ನೀ ಬರೆದಡೂ ಬೆರೆ; ನಾನೊಲ್ಲೆ ನಿಜಶಾಂತೇಶ್ವರಾ.

– ಕಾಟಕೂಟಯ್ಯಗಳ ಪುಣ್ಯಸ್ತ್ರೀ ರೇಚವ್ವೆ

ಆವ ಕಾಯಕವ ಮಾಡಿದಡೂ ಒಂದೆ ಕಾಯಕವಯ್ಯಾ,
ಆವ ವ್ರತವಾದಡೂ ಒಂದೆ ವ್ರತವಯ್ಯಾ
ಕಾಯ ತಪ್ಪಿದಡೆ ಸಾವಿಲ್ಲ: ವ್ರತತಪ್ಪಿದಡೆ ಕೂಡಲಿಲ್ಲ
ಕಾಕಾಪಿಕದಂತೆ ಕೂಡಲು ನಾಯಕನರಕ
ಗಂಗೇಶ್ವರ ಲಿಂಗದಲ್ಲಿ.

– ಹಾದರ ಕಾಯಕದ ಮಾರಯ್ಯಗಳ ಪುಣ್ಯಸ್ತ್ರೀ ಗಂಗಮ್ಮ

ಇವೆಲ್ಲಾ ವ್ರತದ ಬಗೆಗೆ ನಿಷ್ಠವಾಗಿರಬೇಕೆಂಬ ಆಶಯವುಳ್ಳ ವಚನಗಳು. 'ಬಾಯಲ್ಲಿ ಪಡಿಹಾರನ ಪಾದರಕ್ಷೆಯನಿಕ್ಕುವೆ, ಗುರುಲಿಂಗ ಜಂಗಮದ ಕಾಲ ಕಟ್ಟುವೆ' ಈ ಮಾತುಗಳಲ್ಲಿನ ತೀವ್ರತೆ ಅವರುಗಳ ವ್ರತನಿಷ್ಠೆಯನ್ನು ವ್ಯಕ್ತಪಡಿಸುತ್ತವೆ. ಕಾಪಿಡುವ ಹೊಣೆ ಹೊಂದಿದ ನೆಲೆಯ ಭಾಷೆ ಅದನ್ನು ತೀವ್ರವಾಗಿ ಬೆಂಬಲಿಸುತ್ತದೆ. "ವ್ರತ ಎಂಬುದು ಪುರುಷ ನಿರ್ಮಿತ ತಾತ್ವಿಕ ಚೌಕಟ್ಟು. ಅದು ಕೆಲವರಿಗೆ, ಮಹಿಳೆಯರಿಗೆ ಬೋಧಿಸಿದ್ದು, ಕೊಟ್ಟದ್ದು-ಇವರು ಪಡೆದುಕೊಂಡದ್ದು ಪುರುಷ ವಚನಕಾರರಲ್ಲಿಯೂ ಅದು ಒಂದು ವರ್ಗದವರ ಬೌದ್ಧಿಕ ನಿರ್ಮಿತಿ"[7]. ವಚನಕಾರ್ತಿಯರಲ್ಲಿ ಅದರಲ್ಲೂ ಎಲ್ಲ ಕೆಳವರ್ಗದ ವಚನಕಾರ್ತಿಯರಲ್ಲಿ ಈ ನಿಷ್ಠೆ ತೀವ್ರವಾಗಿರುವುದನ್ನು ಗಮನಿಸಿದಾಗ ಇವುಗಳ ಹಿನ್ನೆಲೆಯಲ್ಲಿ ಅವರ ಬದುಕಿನ ಸಾಮಾಜಿಕತೆಯನ್ನು ಗ್ರಹಿಸಬೇಕಾಗುತ್ತದೆ. ವ್ರತವನ್ನು ಬೋಧಿಸಿದ ಪುರುಷವರ್ಗ ಅದನ್ನು ಪಾಲಿಸದಿರುವುದನ್ನು ಈ ವಚನಗಳು ಎತ್ತಿ ಹೇಳುತ್ತವೆ. ಅಕ್ಕ, ಮುಕ್ತಾಯಕ್ಕ, ಬೊಂತಾದೇವಿ, ನೀಲಮ್ಮ ಮುಂತಾದ ವಚನಕಾರ್ತಿಯರಲ್ಲಿ ಕಾಣದ ವ್ರತನಿಷ್ಠೆ ಕೆಳವರ್ಗದ ವಚನಕಾರ್ತಿಯರಲ್ಲಿ ಯಾಕೆ ಮುಖ್ಯವಾಗುತ್ತದೆ, ಎನ್ನುವುದರ ಜೊತೆಗೆನೇ ಅಕ್ಕ, ಮುಕ್ತಾಯಕ್ಕ, ಬೊಂತಾದೇವಿಯರ ಆಧ್ಯಾತ್ಮಿಕ ನೆಲೆ, ಇಲ್ಲಿನ ವಚನಕಾರ್ತಿಯರಲೆಲ್ಲೂ ಕಾಣುವುದೇ ಇಲ್ಲ ಎಂಬುದು ಕೂಡಾ ಅಷ್ಟೇ ಮುಖ್ಯವಾಗುತ್ತದೆ. ಕೊಟ್ಟದ್ದನ್ನ, ತಮ್ಮ ಪರಿಸರದಲ್ಲಿ ಉಳಿಸಿ ಬೆಳೆಸುವ ಅಚ್ಚುಕಟ್ಟಿನ ಕೆಲಸವನ್ನವರು ಶ್ರದ್ಧೆಯಿಂದ ಮಾಡುತ್ತಾರೆ.

ಮುಂದುವರೆದು ವ್ರತಹೀನರನ್ನು ಕುರಿತು ಮಾತನಾಡುವ ವಚನಗಳು ಮತ್ತೆ ನಡೆ-ನುಡಿ ಇವುಗಳ ನಡುವೆ ಸಾಮ್ಯತೆ ಇಲ್ಲದಿರುವ ಅಂಶವನ್ನು ಹೇಳುತ್ತವೆ. ಮೇಲ್ವರ್ಗದವರ, ಪುರುಷರ ಈ ನಡಾವಳಿಯನ್ನು ಪ್ರತಿಭಟಿಸಿ ವಚನಕಾರ್ತಿಯರು ತಮ್ಮ ರೂಪಕಗಳನ್ನು ಸೃಷ್ಟಿಸುತ್ತಾರೆ. ಅವರನ್ನು ಪ್ರಾಣಿ ರೂಪಕಗಳ ಮುಖಾಂತರ ವಿಡಂಬಿಸುತ್ತಾರೆ. ಕತ್ತೆ, ಕೋಣ, ಕುರಿ, ಕೋಡುಗ, ಬಾಲಹುಳು........ ಈ ಎಲ್ಲ ಪ್ರಾಣಿಗಳು ವ್ರತಹೀನರನ್ನು ಖಂಡಿಸುವುದಕ್ಕೆ ಬಳಕೆಯಾಗುತ್ತವೆ.

> ಕುಂಜರದ ವೇಷದ ತೊಟ್ಟು ಹಂದಿಯಂತೆ ತಿರುಗುವ
> ಕೊಂಜಿನಕುರಿಯಂತೆ ಕೂಗಿದಡೇನು ಲಿಂಗೈಕ್ಯರಾಗಬಲ್ಲರೆ?
> ಕೋಟ್ಯಾನುಕೋಟಿಯನೋದಿದಡೇನು ಸಾತ್ವಿಕರಾಗಬಲ್ಲರೆ?
> ಬೆನ್ನುಹುಳಿತ ಕೋಣನಂತೆ ಮನೆಮನೆಯ ತಿರಿದುಂಡಡೇನು, ಮಹಾಜ್ಞಾನಿಯಾಗಬಲ್ಲರೆ।
> ಅಮುಗೇಶ್ವರಲಿಂಗವನರಿಯದವರು ಓದಿದಡೇನು? ಕತ್ತೆ ಬೂದಿಯಲ್ಲಿ ಬಿದ್ದಂತಾಯಿತ್ತು.
>
> – **ಅಮುಗೆ ರಾಯಮ್ಮ**

ಮರನೇರಿ ಹಣ್ಣನರಸ ಹೋದಡೆ
ಮರಮುರಿದು ಬಿದ್ದ ಮರುಳು ಮಾನವನಂತೆ
ಕೆಸರೊಳಗಣ ಹುಲ್ಲ ಮೇಯಹೋದ ಪಶುವಿನಂತೆ
ಕೊಂಬೆ. ಕೊಂಬೆಗೆ ಹಾರುವ ಕೋಡಗನಂತೆ
ಉಂಡ ಮನೆಯ ದೂರುವ ಒಡೆಕಾರನಂತೆ
ಹಳ್ಳ ಹಳ್ಳ ತಿಬ್ಬಳಿ ತಿರುಗುವ ಬಳ್ಳುವಿನಂತೆ
ಮಾತಿನಲ್ಲಿ ಬ್ರಹ್ಮವ ನುಡಿವ ವೇಷಧಾರಿಗಳ ಲಿಂಗಾಂಗಿಗಳೆಂಬವೆ
ಮಾಲಿಗೆ ತಂದ ಹುಡಿಯ ನಾಯಿ ನರಿ ತಿಂದಂತೆ ಕಾಣಾ ಅಮುಗೇಶ್ವರಾ

**– ಅಮುಗೆ ರಾಯಮ್ಮ**

ಬೆಟ್ಟದ ನೆಲ್ಲಿಯಕಾಯ ಪಟ್ಟಣಕ್ಕೆ ಹೊತ್ತುಕೊಂಡು ಹೋಗಿ ಹೊಟ್ಟೆಯ
ಹೊರೆಯುವವನಂತೆ.
ಉತ್ತಮ ತೇಜಿಯ ಹೆಸರು ಹೇಳಿ ಕಡಲೆಯ ತಿಂಬ ಗಾವಿಲಗನಂತೆ
ಅತ್ತೆಯ ಹೆಸರ ಹೇಳಿ ಹೊಟ್ಟೆಯ ಹೊರೆವ ತೊತ್ತಿನಂತೆ
ಅವ್ವರ ವಚನಂಗಳ ಅಲ್ಲಿಗಲ್ಲಿಗೆ ಉಸುರಿ
ಅನ್ನ, ಕೂಳಿಂಗೆ ಹರದಾಡುವ ಅಜ್ಞಾನಿಗಳ
ಅನುಭಾವಿಗಳೆಂಬೆನೆ? ಅಯ್ಯಾ, ವಿರಕ್ತರೆಂಬೆನೆ?
ವೇಷವ ಹೊತ್ತು ತಿರುಗುವ ಡೊಂಬನಂತೆ.

**– ರಾಯಮ್ಮ**

ಧನಶೀಲ ಮನಶೀಲ ತನುಶೀಲ ಸರ್ವಮಯ ವ್ಯಕ್ತಂಗೆ ಕಾಂಬುದೆಲ್ಲವು
ಶೀಲ ಇಂತೀ ವ್ರತಸಂಪನವೆಲ್ಲವು ಆಚಾರ ಕುರಿತು ಮಾಡುವ ನೇಮ
ಎಂಬುದತಾನರಿಯಬೇಕು.
ಗುರುಲಿಂಗ ತನುವಿನರ್ಪಿತ, ತ್ರಿವಿಧಕ್ಕೆ ತ್ರಿವಿಧವ ಕೊಟ್ಟು
ತನ್ನ ವ್ರತಕ್ಕೆ ಭಿನ್ನಭಾವವಿಲ್ಲದೆ ನಿಂದುದೆ ವ್ರತ .
ಓೀಗಲ್ಲದೆ, ಇದಿರ ಮಾತಿಂಗಂಜಿ
ಕೊಡುವ ಕೊಂಬುವರ ನಿಹಿತಕ್ಕಂಜಿ ನಡೆವನ ವ್ರತ
ಬಂಡಾದ ಶೀಲವ ಬಿಡುವ ನಾರಿಗ ಮುಟ್ಟದೆ ಗುಂಗುವ ತೆರನಂತೆ
ಸರ್ವವ ತಾ ಮುಟ್ಟುವಲ್ಲಿ ಜಂಗಮಮುಟ್ಟದೆ ತಾ ಮುಟ್ಟದನಾದಡೆ
ಕೆಟ್ಟುನಡೆದಂತೆ.
ಬಿಟ್ಟುಬಿದ್ದು ಬೈಯ್ಯಲಾರೆ. ಕಟ್ಟಿದ್ದು ಪೊಯ್ಯಲಾರೆ.
ಕಾಂಬುದಕ್ಕೆ ಮೊದಲೆ ಕಣ್ಣು ಮುಚ್ಚುವೆನು. ಈ ಗುಣತಪ್ಪದು ನಿಮ್ಮಾಣೆ.
ಆಚಾರವೆ ಪ್ರಾಣವಾದ ರಾಮೇಶ್ವರ ಲಿಂಗದ ಆಣತಿ.

**– ಅಕ್ಕಮ್ಮ**

'ಬಾಯಿಯಿದ್ದು ಬೈಯ್ಯಲಾರೆ, ಕಯ್ಯಿದ್ದು ಪೊಯ್ಯಲಾರೆ' ಈ ಸ್ಥಿತಿಯೊಂದರ ನಿರ್ಮಾಣ ಹೆಣ್ಣಿನ ಅಸಹಾಯಕತೆಯನ್ನು ಹೇಳುವುದರ ಜೊತೆಗೆ, ವಚನ ಆಂದೋಲನ ಸಂದರ್ಭದಲ್ಲೇ ಉಂಟಾದ ಬಿಕ್ಕಟ್ಟುಗಳನ್ನು ಬಿಂಬಿಸುತ್ತದೆ. ವಚನಕಾರರ ಸುಧಾರಣಾವಾದಿ ಚಳುವಳಿಯಲ್ಲೇ ಉಂಟಾದ ಬಿರುಕುಗಳನ್ನು ಬಿಂಬಿಸುತ್ತದೆ

ವ್ರತನಿಷ್ಠೆ, ವ್ರತಹೀನರನ್ನು ಕಂಡರೆ ತಾತ್ಸಾರ ಈ ಕುರಿತು ವಚನಗಳನ್ನು ಹೊರತುಪಡಿಸಿದ ಅನೇಕ ವಚನಗಳು ತಮ್ಮ ಜಾತಿ ಆಹಾರ ಪದ್ಧತಿ ಕಾಯಕ ನಿಷ್ಠೆ ಕುರಿತು ಮಾತನಾಡುತ್ತವೆ.

ಕಾಮುಕಕೆ ದುರ್ಜನಗೆ ಕಪಟಗೆ ಹೋಮಚೋರಗೆ ಕಾರುಕ ಸುಮ್ಮಗಾರಗೆ
ಅವ ಭಾವವ ಮೃತವ ಮಾಡಲಿಕ್ಕೆ ಅದ ಭಾವಿಸಿ ನಡೆಯಬಲ್ಲನೆ?
ಕಾಗೆಗೆ ರಸಾನ್ನ ಮುಂದಿರಲಿಗೆ. ಹರಿವ ಕೀಟಕಂಗೆ ಸರಿವುದಲ್ಲದೆ
ಮತ್ತೆ ಅದು ಸವಿಯ ಸಾರವ ಬಲ್ಲುದೆ?
ಇಂತೀ ಇವು ತಮ್ಮ ಜಾತಿಯ ಲಕ್ಷಣವ ಕೊಂದಡೂ ಬಿಡವಾಗಿ
ವ್ರತಾಚಾರವ ಸಂಬಂಧಿಸುವಲ್ಲಿ ಶರಣರೆಲ್ಲರ ಕೂಡಿ
ಈ ಗುಣ ಅಹುದು ಅಲ್ಲ ಎಂದು ಹೇಳಿ
ಜಾತಿ ವರ್ಗದ ಗುಣವ ನೀಕರಿಸಿ ಬಿಡಿಸಿ
ಸುಜಾತಿಯ ಅರಿಸಿನ ಪಟ್ಟವಂ ಕಟ್ಟಿ
ಶರಣರೆಲ್ಲರ ನಿಹಿತಾಚಾರದಲ್ಲಿ ಸಹಭೋಜನಂ ಮಾಡಿ
ಇಂತೀ ಗುಣನಿಹಿತ ವ್ರತ ಆಚಾತನ ಒಲುಮೆ
ಆಚಾರವೆ ಪ್ರಾಣವಾದ ರಾಮೇಶ್ವರ ಲಿಂಗದ ನಿಹಿತದ ಶೀಲದ ನೇಮ

– ಅಕ್ಕಮ್ಮ

ಒಡೆಯರ ಸಮಯಾಚಾರವೆಂದ ಮತ್ತೆ
ಹಲ್ಲುಕಡ್ಡಿ ದರ್ಪಣ. ನಖಚಣ, ಮೆಟ್ಟಡಿ ಮುಂತಾದ
ತಾ ಮುಟ್ಟುವ. ತಾ ತಟ್ಟುವ. ಸೋಂಕುವ
ತನ್ನಯ ಸಂದೇಹ ಮುಂತಾದ
ದಿಟ ಮೊದಲು ಹುಸಿ ಕಡೆಯಾದ ದ್ರವ್ಯವೆಲ್ಲವನು ಕೊಟ್ಟು
ತಾ ಕೊಳ್ಳಿದ್ದನಾಯಿತ್ತಾದಡೆ
ಬೈವುದಕ್ಕೆ ಬಾಯಿ ತೆರಪಿಲ್ಲ. ಹೊಯ್ವುದಕ್ಕೆ ಕೈಗೆ ತೆರಪಿಲ್ಲ
ನೋಡುವ ಕಣ್ಣನೆ ಮುಚ್ಚುವೆ. ಈ ನೋವನಿನ್ನಾರಿಗೂ ಹೇಳೆ
ಆಚಾರವೆ ಪ್ರಾಣವಾದ ರಾಮೇಶ್ವರ ಲಿಂಗಾ ನೀನೇ ಬಲ್ಲೆ

– ಅಕ್ಕಮ್ಮ

ಈ ಎರಡೂ ವಚನಗಳು ಬಹಳ ಸೂಕ್ಷ್ಮವಾಗಿ ವಚನ ಚಳುವಳಿಯ ಸಂದರ್ಭದಲ್ಲಿ ಕೆಳವರ್ಗದವರು ತಮ್ಮನ್ನು ಶರಣರನ್ನಾಗಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಹೇಗೆ ದ್ವಂದ್ವಾತ್ಮಕ ನೆಲೆಗಳನ್ನು ಹೊಂದಿದ್ದರು. ಹೊಸದಕ್ಕೆ ಸಂಪೂರ್ಣವಾಗಿ ತಮ್ಮನ್ನು ಒಪ್ಪಿಸಿಕೊಳ್ಳಲಾಗದ ಮನಸ್ಥಿತಿ, ಇರುವ ಸ್ಥಿತಿಯಲ್ಲೂ ನೆಮ್ಮದಿಯನ್ನು ಕಾಣದ ಒಂದು ಸ್ಥಿತಿ ನಿರ್ಮಾಣವಾಗಿತ್ತು ಎಂಬುದನ್ನು ಹೇಳುತ್ತದೆ. ಭಕ್ತರಾಗುವಲ್ಲಿನ, ಭಕ್ತರಾದ ನಂತರವೂ ಹೆಣ್ಣು ತೋಡಿಕೊಳ್ಳುವ ಈ ಮಾತುಗಳು. "ಆಶಯಗಳು ಅಥವಾ ಗ್ರಹಿಕೆಗಳು ಬಹುಪಾಲು ವಚನಕಾರರ ಸಂವೇದನೆಯಾಗಲಿಲ್ಲ ಅಥವಾ ಜನಸಾಮಾನ್ಯರ ಸಂವೇದನೆಯ ವಿನ್ಯಾಸವನ್ನು ಬದಲಿಸಲು ಶಕ್ತವಾಗಲಿಲ್ಲ." ಎಂಬುದನ್ನು ಸೂಚಿಸುತ್ತದೆ.

ಕುರಿ ಕೋಳಿ ಕಿರುಮೀನು ತಿಂಬವರಿಗೆಲ್ಲ ಕುಲಜ ಕುಲಜರೆಂಬರು
ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ ಮಾದಿಗ ಕೀಳುಜಾತಿ
ಎಂಬರು. .
ಅವರೆಂತು ಕೀಳು ಜಾತಿಯದರು? ಜಾತಿಗಳು ನೀವೇಕೆ ಕೀಳಾದಿರೊ
ಬ್ರಾಹ್ಮಣನುಂಡುದು ಪುಲ್ಲಿಗೆ ಶೋಭಿತವಾಗಿ ನಾಯಿ ನೆಕ್ಕಿ ಹೋಯಿತು
ಮಾದಿಗರುಂಡುದು ಪುಲ್ಲಿಗೆ ಬ್ರಾಹ್ಮಣಗೆ ಶೋಭಿತವಾಯಿತು.
ಅದೆಂತೆಂದಡೆ ಸಿದ್ದಲಿಕೆಯಾಯಿತು, ಸಗ್ಗಳೆಯಾಯಿತು.
ಸಿದ್ದಲಿಕೆಯ ತುಪ್ಪವನು ಸಗ್ಗಳೆಯ ನೀರನು
ಶುದ್ಧವೆಂದು ಕುಡಿವ ಬುದ್ಧಿಗೇಡಿ ವಿಪ್ರರಿಗೆ ನಾಯಕನರಕ ತಪ್ಪದಯ
ಉರಿಲಿಂಗಪೆದ್ದಿಗಳರಸು ಒಲ್ಲನವ್ವಾ

– ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ

"ಜಾತಿಗಳು ನೀವೇಕೆ ಕೀಳಾದಿರೋ" ಎನ್ನುವ ಪ್ರಶ್ನೆಯೊಂದಿಗೆ ತನ್ನ ಜಾತಿಯ ಅಸ್ತಿತ್ವವನ್ನು ತನ್ನ ಆಹಾರ ಪದ್ಧತಿಯ ಬಳಕೆಯನ್ನು ಸಮರ್ಥಿಸುವ ಕಾಳವ್ವೆ ಮಾತಿನಲ್ಲೇ ಚಾಟಿ ಕೊಡುತ್ತಾಳೆ.

ಮಾಡುವ ಕಸುಬು ಕಾಯಕವನ್ನು, ಅದೇ ಕಾಯಕ ಆಧ್ಯಾತ್ಮಿಕ ನೆಲೆಯನ್ನು ಕಟ್ಟಿಕೊಳ್ಳುವ ಮಾರ್ಗವಾದದ್ದು ಬಹುತೇಕ ಸಂಪೂರ್ಣವಾಗಿ ಕೆಳವರ್ಗದ ವಚನಕಾರರಲ್ಲೇ. ತಮ್ಮದೇ ಆದ ಕಾಯಕವುಳ್ಳ ಮಹಿಳೆಯ ಸಂಖ್ಯೆ ಕಡಿಮೆಯಾದರೂ ವೃತ್ತಿ ನಿರತ ವಚನಕಾರ್ತಿಯರ ಅನುಭವಗಳು ಬಹಳ ನಿಚ್ಚಳವಾದ ಅಭಿವ್ಯಕ್ತಿಯನ್ನು ಪಡೆದುಕೊಂಡಿವೆ.

ಹದ ತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಲ್ಲ

– ಕೊಟ್ಟಣದ ಸೋಮಮ್ಮ

ಹದ ಮಣ್ಣಲ್ಲ ಮಡಿಕೆಯಾಗಲಾರದು

**– ಗುಂಡಯ್ಯಗಳ ಪುಣ್ಯಸ್ತ್ರೀ ಕೇತಲದೇವಿ**

ನಾ ತಿರುಹುವ ರಾಟೆಯ ಕುಲಜಾತಿಯ ಕೇಳಿರಣ್ಣಾ
ಅಡಿಯ ಹಲಗೆ ಬ್ರಹ್ಮ; ತೋರಣ ವಿಷ್ಣು
ನಿಂದ ಗೊಂಬೆ ಮಹಾರುದ್ರ
ರುದ್ರನ ಬೆಂಬಳಿಯವೆರಡು ಸೂತ್ರಕರ್ಣ
ಅರಿವೆಂಬ ಕದಿರು, ಭಕ್ತಿಯೆಂಬ ಕೈಯಲ್ಲಿ ತಿರಹಲಾಗಿ
ಸುತ್ತಿತು ನೂಲು; ಕದಿರು ತುಂಬಿತು
ರಾಟೆಯ ತಿರುಹಲಾರೆ ಎನ್ನ ಗಂಡ ಕುಟ್ಟಿಹ
ಇನ್ನೇವೆ ಕದಿರರೆಮ್ಮಿಯೊಡೆಯ ಗುಮ್ಮೇಶ್ವರಾ

**– ಕದಿರ ರೆಮ್ಮವ್ವೆ**

ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ

**– ಸೂಳೆ ಸಂಕವ್ವೆ**

ಆಯ್ದಕ್ಕಿ ಲಕ್ಕಮ್ಮ ದಂಪತಿಗಳು ಕಾಯಕವನ್ನು ಅತ್ಯಂತ ನಿಷ್ಠೆಯಿಂದ ವ್ರತದ ಹಾಗೆ ಪಾಲಿಸುತ್ತಿದ್ದರು. ಗಂಡ ಹೆಚ್ಚು ಅಕ್ಕಿ ತಂದಾಗ, ಆತನಿಗೆ ತಿಳಿಹೇಳುವ ಲಕ್ಕಮ್ಮನ "ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ, ಒಮ್ಮನವ ಮೀರಿ ಇಮ್ಮನದಲಿ ತಂದಿರಿ ---- ಇದು ಅಮಲೇಶ್ವರ ಲಿಂಗಕ್ಕೆ ಸಲ್ಲದ ಬೋನ ಅಲ್ಲಿಯೇ ಸುರಿದು ಬನ್ನಿ ಮಾರಯ್ಯಾ" ಎನ್ನುವ ಮಾತುಗಳು ಏಕಕಾಲಕ್ಕೆ ದಾಂಪತ್ಯದಲ್ಲಿ ಹೆಣ್ಣಿನ ಮಹತ್ವವನ್ನು ಮತ್ತು ಹೆಣ್ಣು ಬದುಕನ್ನು ವರ್ತಮಾನದಲ್ಲಿ ನಡೆಸುವ ಪರಿಯನ್ನು ಹೇಳುತ್ತವೆ. ಇಹದ ಇಂದಿನ ಬದುಕಿನ ಸಾರ್ಥಕತೆಯ ಅರಿವು ಅವಳಿಗಿರುವುದರಿಂದಲೇ ಗೊತ್ತಿಲ್ಲದ ಪರವನ್ನು ಬಯಸುವ ಗಂಡನಿಗೆ ಮಾಡಿ ನೀಡಿ ಹೋದೆನೆಂಬಾಗ ಕೈಲಾಸವೇನು ಕೈಕೂಲಿಯೇ ಮುಂದೊಂದು ಕಲ್ಪಿಸದೆ ಹಿಂದೊಂದ ಭಾವಿಸದೆ ಸಲೆ ಮಾತುಗಳನ್ನು ಹೇಳಿ ಅವನನ್ನು ತಿದ್ದುತ್ತಾಳೆ. ಕೆಳವರ್ಗದ ಹೆಣ್ಣೊಬ್ಬಳ ಈ ಮಾತುಗಳು ಬಹಳ ಮುಖ್ಯವಾಗುವುದು ಮೇಲ್ವರ್ಗಕ್ಕೆ ಸೇರಿದ ವಿಚಾರ ಪತ್ನಿ ಎಂದು ಹೇಳಿಕೊಂಡ ನೀಲಮ್ಮನ ಮಾತುಗಳ ಎದುರಿಗಿಟ್ಟಾಗ;

ಏಕೆನ್ನ ಪುಟ್ಟಿಸಿದೆಯಯ್ಯಾ ಹೆಣ್ಣು ಜನ್ಮದಲ್ಲಿ
ಪುಣ್ಯವಿಲ್ಲದ ಪಾಪಿಯ?
ನಾನು ಇಹಪರಕ್ಕೆ ದೂರಳಯ್ಯಾ
ಎನ್ನ ನಾಮ ಹೆಣ್ಣು ನಾಮವಲ್ಲಯ್ಯಾ
ನಾನು ಸಿರಿಯಿದ್ದ ವಧುವಾದ ಕಾರಣ

"ಏಳೇಳು ಜನ್ಮದಲ್ಲಿ ಸೂಕರನ ಹೊಟ್ಟೆಯಲ್ಲಿ
ಮುಟ್ಟಿನೂರೆಂದು ಕುಲ ಹದಿನೆಂಟು ಜಾತಿಯ ಅಮೇಧ್ಯವ ತಿಂದು
ಹೊಲೆಯರ ಮನೆಯ ಹೊಸ್ತಿಲ ಕಾಯಯ್ದುಕೊಂಡಿಪ್ಪರಯ್ಯಾ"

**– ಅಮುಗೆರಾಯಮ್ಮ**

"ಹೊನ್ನ ಬಿಟ್ಟಡೇನು ಹೆಣ್ಣ ಬಿಟ್ಟಡೇನು ಮಣ್ಣಬಿಟ್ಟಡೇನು ವಿರಕ್ತನಾಗಬಲ್ಲನೆ?"

**– ಅಮುಗೆರಾಯಮ್ಮ**

ಇಂಥ ಪ್ರಯೋಗಗಳ ಸೃಷ್ಟಿಯಾಗುತ್ತದೆ.

"ಪುರುಷೀಕರಣದ ಪ್ರಕ್ರಿಯೆಯಲ್ಲ ಹುಟ್ಟುವ ನಿರೀಕ್ಷೆಗಳು. ನಿರೀಕ್ಷೆಯನ್ನು ನಿಜ ಮಾಡಬೇಕೆನ್ನುವ ಪ್ರಯತ್ನಗಳು ಹೆಣ್ಣನ್ನು, ಅವಳ ಭಾಷೆಯನ್ನು ತನ್ನ ನಿಜವಾದ ಅಭಿವ್ಯಕ್ತಿ ಕಡೆ ದೂರ. ದೂರ ಕರೆದುಕೊಂಡು ಹೋಗುತ್ತವೆ." ಹೌದಾದರೂ ಹನ್ನೆರಡನೆಯ ಶತಮಾನದ ಕೆಳವರ್ಗದ ವಚನಕಾರ್ತಿಯರ ಕೆಲವು ವಚನಗಳು ಭಾಷಾದಂಗೆಯನ್ನು ಮಾಡುತ್ತವೆ. ಭಾಷೆಯನ್ನು ಮುರಿದು ಕಟ್ಟುವ ಪ್ರಕ್ರಿಯೆಗಳು ಬಹಳ ಕುತೂಹಲಕರವಾದ ರೀತಿಯಲ್ಲಿ ನಡೆಯುತ್ತವೆ.

ಹೆಣ್ಣ ಬಿಟ್ಟು ಲಿಂಗವನೊಲಿಸಬೇಕೆಂಬರು
ಹೆಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೇ

**– ಗಣೇಶ ಮಸಣಯ್ಯಗಳ ಪುಣ್ಯಸ್ತ್ರೀ,**

ಎಂಬ ಮಾತುಗಳ ಮುಖಾಂತರ ರೂಢಿಯ ಸ್ತ್ರೀ ವಿರೋಧಿ ಧೋರಣೆಯನ್ನು ವಚನಕಾರ್ತಿ ಪ್ರಶ್ನಿಸುತ್ತಾಳೆ.

ಗಂಡು ಮೋಹಿಸಿ ಹೆಣ್ಣ ಹಿಡಿದೆಡೆ
ಅದು ಒಬ್ಬರ ಒಡವೆ ಎಂದು ಅರಿಯಬೇಕು
ಹೆಣ್ಣು ಮೋಹಿಸಿ ಗಂಡ ಹಿಡಿದೆಡೆ
ಉತ್ತರವಾವುದೆಂದರಿಯಬೇಕು

ಎನ್ನುವ ಮಾತುಗಳ ಮೂಲಕ ಗೊಗ್ಗವ್ವೆ ಹೆಣ್ಣೊಳಗೂ ಇರುವ ಮೋಹವನ್ನು ಕುರಿತು ಹೇಳುತ್ತಾಳೆ. ಗಂಡು ಹೆಣ್ಣು ಎರಡರ ಉಭಯವನ್ನು ಕಳೆಯಬೇಕೆಂಬ ಕಡೆಯ ಮಾತುಗಳಿಗಿಂತ, ಹೆಣ್ಣಿನ ಒಳಗನ್ನು ಹೇಳುವ ಮಾತುಗಳು ಮುಖ್ಯವಾಗುತ್ತವೆ.

ಎಲ್ಲರ ಗಂಡಂದಿರು ಮೇಲೆ
ಎನ್ನ ಗಂಡ ಕೆಳಗೆ ನಾ ಮೇಲೆ

ಎನ್ನುವ ಗೊಗ್ಗವ್ವೆಯ ಮಾತುಗಳು ಪರಿಮಿತ ಚೌಕಟ್ಟಿನ ಬದುಕಿನೊಳಗೂ ಹೊರಬಂದ ನಿರ್ಭಿಡೆಯ ಸೆಳಕುಗಳಾಗಿವೆ.

ಹೀಗೆ ಕೆಳವರ್ಗದ ವಚನಕಾರ್ತಿಯರ ಭಾಷೆ ಮತ್ತು ರೂಪಕಗಳನ್ನು ಕುರಿತು, ಅವುಗಳ ಸಾಧ್ಯಾಸಾಧ್ಯತೆಗಳನ್ನು ಕುರಿತು ಇಷ್ಟು ಮಾತನಾಡಿದ ಮೇಲೂ ಕೆಲವು ಸಂದೇಹಗಳು, ಪ್ರಶ್ನೆಗಳು ಉಳಿಯುತ್ತವೆ. ಅಭಿವ್ಯಕ್ತಿಯಲ್ಲಿ ತೊಡಗಿಕೊಂಡ ವಚನಕಾರ್ತಿಯರು ತಮ್ಮ ಅಂತರಂಗದ ಭಾವಗಳನ್ನು ಪೂರ್ಣವಾಗಿ ಬಿಚ್ಚಿಟ್ಟಿದ್ದಾರೆಯೇ? ವಚನ ರಚನೆಗಳಲ್ಲಿರುವ ಭಾಷೆಗೆ ಹೊರತಾದ ಅದು ಭಾಷೆಯೊಂದು ಇದ್ದಿರಬಹುದೇ? ಇದ್ದರೂ ಅದು ಬಳಕೆಯಾಗಿಲ್ಲವೆ? ತನಗೆ ದೊರಕಿದ ಮುಕ್ತತೆಯ ಅವಕಾಶದಲ್ಲಿ ಹೆಣ್ಣು ಅವಳ ಕೌಟುಂಬಿಕ ಪರಿಧಿಯಾಚೆಗೆ ಬಂದ ಆಧ್ಯಾತ್ಮಿಕ ನೆಲೆಯಲ್ಲಿ ನಿಲ್ಲುವುದಕ್ಕಾಯ್ತು? ಸಮಾನಸ್ವಾತಂತ್ರ್ಯ ಎಂದಾಗಲೂ;

“ಪುರುಷನ ಆಚಾರದಲ್ಲಿ ಸತಿ ನಡೆಯಬೇಕಲ್ಲದೆ ಸತಿ ಸ್ವತಂತ್ರ ಉಂಟೆ?”
“ಇಂತೀ ಒಡೆಯುವ ವ್ರತ ಮೊದಲು, ಕಡೆಯಲ್ಲಿ ಭಕ್ತಂಗೆ.
ಬೈವುದಕ್ಕೆ ಬಾಯಿ ತೆರಪಿಲ್ಲ: ಹೊಯ್ವುದಕ್ಕೆ ಕೈಗೆ ಅಡಹಿಲ್ಲ
ನೋಡುವ ಕಣ್ಣಿಗೆ ಮುಚ್ಚುವೆ ಈ ನೋವನ್ನಿನ್ನಾರಿಂಗೂ ಹೇಳೆ”
“ಒತ್ತೆಯ ಹಿಡಿದು ಮತ್ತೊತ್ತೆಯ ಹಿಡೆಯೆ
ಹಿಡಿದಡೆ ಬತ್ತಲೆ ನಿಲಿಸಿ ಕೊಲುವರಯ್ಯ”

ಇಂಥ ಮಾತುಗಳು ಯಾಕೆ ಹುಟ್ಟಿಕೊಂಡವು? ಇಂಥ ಮಾತುಗಳು ಪುರುಷಾಧಿಕಾರದಲ್ಲಿ ಮಹಿಳೆ ಬದುಕಬೇಕಾದ ಸ್ಥಿತಿಯ ವಾಸ್ತವವನ್ನು ಹೇಳುತ್ತವೆ. ಉಭಯವನ್ನು ಅಳಿದು ಆಧ್ಯಾತ್ಮಿಕ ಲೋಕದಲ್ಲಿ ಭಗವಂತನನ್ನು ಸೇರಬಯಸುವ ಮಾತುಗಳು, 'ಶರಣಸತಿ ಲಿಂಗಪತಿ' ಎನ್ನುವ ತತ್ವ, ಹೆಣ್ಣಿನ ಅಂದಿನ ಒಳಹೊರಗನ್ನು ಸಂಪೂರ್ಣವಾಗಿ ದರ್ಶಿಸುವುದಿಲ್ಲ. “ಅವರೆಗೂ ದನಿಯೇ ಇಲ್ಲದೆ ಅಡಗಿಹೋಗಿದ್ದು, ಸಮಾಜದ ಹಲವಾರು ಗುಂಪಿನ ಜನರು ಈ ಚಳುವಳಿಯ ಸಂದರ್ಭದಲ್ಲಿ ಮಾತಾಡಿದರು. ಇವರು ತಮ್ಮ ಪ್ರಜ್ಞೆಗೆ ಸಹಜವಾದ ಸಂವೇದನೆಗಳನ್ನು ಬಳಸಿದಂತೆ ಕಾಣುವುದಿಲ್ಲ. ಬದಲಿಗೆ ಚಳುವಳಿಯ ಪ್ರಧಾನ ಆಶಯವಾದ ಅಂತರಂಗ ಸಾಕ್ಷಿತ್ವವನ್ನು ಸಾಧಿಸಲು ಯತ್ನಿಸುವಂತೆ ತೋರುತ್ತದೆ. ಹೀಗಾಗಿ ಅವರ ನಿಜವಾದ ಜಗತ್ತು ಆಗಾಗ ಪ್ರತಿಮೆಗಳ ಮೂಲಕ ಹೊರಬರುವುದನ್ನು ಬಿಟ್ಟರೆ ಅಪರಿಚಿತವಾಗಿಯೇ ಉಳಿಯಿತು”[9] ಎನ್ನುವ ಮಾತುಗಳನ್ನು ಈ ಹಿನ್ನೆಲೆಯಲ್ಲಿ ಒಪ್ಪಬಹುದೆನ್ನಿಸುತ್ತದೆ.

ಕೆಳವರ್ಗದ ವಚನಕಾರ್ತಿಯರ ಭಾಷೆ ಮತ್ತು ರೂಪಕಗಳನ್ನು ಕುರಿತು ಆಲೋಚನೆಗಳನ್ನು ಒಂದೆಡೆ ಇಟ್ಟಮೇಲೂ ಒಂದಿಷ್ಟು ಆಲೋಚನೆಗಳು, ಪ್ರಶ್ನೆಗಳು ಉಳಿದೇ ಇವೆ. ದಾಖಲಿತ 33 ವಚನಕಾರ್ತಿಯರನ್ನು ವಿಭಾಗಿಸಿ ಮೇಲ್ವರ್ಗದ ಕೆಳವರ್ಗದ ವಚನಕಾರ್ತಿಯರೆಂದು ನೋಡುವ ಕ್ರಮ ಸರಿಯೇ? ಅಕ್ಕನ ವಚನಗಳಲ್ಲಿ ಹುಡುಕದ, ನೀಲಮ್ಮನ ವಚನಗಳಲ್ಲಿ ಹುಡುಕದ ಜಾತಿಯ ಹುಡುಕಾಟ ಅಕ್ಕಮ್ಮನಲ್ಲೇಕೆ

ಬೇಕು? ಜಾತಿಯ ವೃತ್ತಿಯ ಪ್ರಶ್ನೆಗಳು ಇವರಲ್ಲೇಕೆ ಪ್ರಶ್ನೆಗಳನ್ನು ಹಾಕಿಲ್ಲ. ಜಾತಿಗೂ ಅಭಿವ್ಯಕ್ತಿಗೂ ಸಂಬಂಧ ಕಲ್ಪಿಸಬೇಕೆ? ಹೆಂಗಸಾಗಿರುವುದರ ಅನುಭವಗಳನ್ನು ಇವರು ಹೆಂಗಸಾಗಿರುವುದರಿಂದ ಹುಡುಕಬೇಕು. ಯಾಕೆ ಇಂಥ ವಿಭಜನೆಗಳನ್ನು ಮಾಡುವ ಕ್ರಮ ಎಷ್ಟು ಸರಿ? ಅವಳ ಹೆಣ್ಣಿನ, ಕೆಳಜಾತಿಯ ಅನುಭವಗಳು ಎಷ್ಟು ಬಂದಿವೆ, ಬಂದಿಲ್ಲ ಎನ್ನುವದನ್ನು ಗಮನಿಸಬೇಕು ಕೆಲವು ಇಕ್ಕಟ್ಟುಗಳು ಉಳಿಯುತ್ತವೆ.

## ಆಕರ ಗ್ರಂಥಗಳು


1. ಅಮರೇಶ ನುಗಡೋಣಿ: ಬಸವಣ್ಣನವರ ವಚನಗಳ ಸಾಂಸ್ಕೃತಿಕ ಮುಖಾಮುಖಿ ವಿಭಾಗದ ಮಾತು. ಪುಟ 7 ಕನ್ನಡ ವಿಶ್ವವಿದ್ಯಾಲಯ ಹಂಪಿ
2. ಎಂ.ಎಸ್. ಆಶಾದೇವಿ: ಮಹಿಳೆ ಬಸವಣ್ಣನ ನಿಲುವುಗಳು ಪುಟ 61 ಕನ್ನಡ ವಿಶ್ವವಿದ್ಯಾಲಯ ಹಂಪಿ
3. ಡಾ॥ ಎಚ್.ಎಸ್. ಶ್ರೀಮತಿ: ಸೇರಿಕೊಂಡ ಎಳೆಗಳು ಪುಟ 60 ಸಿ.ವಿ. ಜಿ ಪ್ರಕಾಶನ ಬೆಂಗಳೂರು
4. ಸಂಪಾದಕರು : ಶಿವಶರಣೆಯ ಸಂಪುಟ ಪ್ರಸ್ತಾವನೆ ಪುಟ 49, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು.
5. ಡಾ॥ ಬಿ.ಎಂ. ಪುಟ್ಟಯ್ಯ: ಅಲಕ್ಷಿತ ವಚನಕಾರರ ಲೋಕದೃಷ್ಟಿ, ಪುಟ 17
6. ಎಂ.ಎಸ್ ಆಶಾದೇವಿ : ಮಹಿಳೆ ಬಸವಣ್ಣನ ನಿಲುವುಗಳು, ಪುಟ 61, ಕನ್ನಡ ವಿಶ್ವವಿದ್ಯಾಲಯ, ಹಂಪಿ.
7. ಲಕ್ಷ್ಮೀಪತಿ ಕೋಲಾರ: ಕೆಳಜಾತಿಯ ವಚನಕಾರರು ಮತ್ತು ಬೆಡಗು (ಲೇ) ಕನ್ನಡ ಸಂಘ ಕ್ರೈಸ್ಟ್ ಕಾಲೇಜು, ಬೆಂಗಳೂರು.
8. ಡಾ॥ ಎಚ್.ಎಸ್ ರಾಘವೇಂದ್ರರಾವ್: ಹೆಣ್ಣು ಮತ್ತು ಭಾಷೆ ಕುರಿತಾದ ಭಾಷಣದಿಂದಾಯ್ದದ್ದು.
9. ಡಾ॥ ಕೆ.ವಿ. ನಾರಾಯಣ : ಬೇರು, ಕಾಂಡ, ಚಿಗುರು. ಪುಟ 166 ಪ್ರ: ವಿವೇಕ ಪ್ರಕಾಶನ ಬೆಂಗಳೂರು


ಇಲ್ಲಿ ಬಳಕೆಗೊಂಡ ವಚನಗಳನ್ನು 'ಶಿವಶರಣೆಯರ ಸಂಪುಟ' ಕನ್ನಡ ಸಂಸ್ಕೃತಿ ಮತ್ತು ನಿರ್ದೇಶನಾಲಯ ಬೆಂಗಳೂರು, ಕೃತಿಯಿಂದ ಆಯ್ದುಕೊಳ್ಳಲಾಗಿದೆ.



## ಲೇಖಕರ ವಿಳಾಸ

ಪಾರ್ವತಿ ಜಿ. ಐತಾಳ್
ಸುರಗಂಗಾ, ಚಿಸ್ತೂರ ಕ್ರಾಸ್ ರಸ್ತೆ
ಕುಂದಾಪುರ - ೫೭೬೨೦೧

ಡಾ. ಜಿ. ಬಾಲಕೃಷ್ಣ
ಸಹ ಪ್ರಧ್ಯಾಪಕರು
ಕನ್ನಡ ಅಧ್ಯಯನ ವಿಭಾಗ
ಕೃಷಿ ವಿಶ್ವವಿದ್ಯಾಲಯ
ಹೆಬ್ಬಾಳ, ಬೆಂಗಳೂರು - ೨೪

ಮೀನಾ ಮೈಸೂರ
೧೧೪೨/೩ ೨೦ಎ
ಸಾರ್ವಜನಿಕ ಹಾಸ್ಟೇಲ್ ರಸ್ತೆ
೬ನೆ ಮುಖ್ಯ ಬೀದಿ
ವಿದ್ಯಾರಣ್ಯಾಪುರ
ಮೈಸೂರು - ೮

ರೂಪ ಹಾಸನ
ಪ್ರೇರಣಾ
ಉತ್ತರ ಬಡಾವಣೆ
ಹಾಸನ.

ಡಾ. ಕೆ.ಆರ್.ಸಿದ್ಧಗಂಗಮ್ಮ
ಪ್ರಕೃತಿ -೫೪೦
ಶಿವಬಸವನಗರ
ಬೆಳಗಾಂವಿ

ಡಾ. ಆರ್. ಲಕ್ಷ್ಮಿನಾರಾಯಣ
ನಂ. ೧೨, ಶ್ರೀ ನಿಕೇತನ
೨ನೇ ಕ್ರಾಸ್. ಶಿವಾನಂದ ನಗರ
ಮೂಡಲಪಾಳ್ಯ,
ಬೆಂಗಳೂರು.

ಡಾ. ವೀಣಾ ಕುಲಕರ್ಣಿ
ಕಮಲಕುಂಜ
೬೧/೧ ಪಂಚ ಕಛೇರಿ ಓಣಿ
ಧಾರವಾಡ

ಡಾ. ಎಲ್.ಸಿ. ಸುಮಿತ್ರಾ
ಅಶ್ವಿನಿ,
ಅನಿಕೇತನ ರಸ್ತೆ
ತೀರ್ಥಹಳ್ಳಿ - ೫೭೭೪೩೨

ಡಾ. ಶಶಿಕಲಾ ಮೊರಬದ
ಸರಕಾರಿ ಪ್ರಥಮ ದರ್ಜೆ ಕಾಲೇಜು
ಬಾಗಲಕೋಟೆ

ಡಾ. ಕೆ.ಬಿ. ಸರಸ್ವತಿ
ಸಹಾಯಕ ಪ್ರಾಧ್ಯಾಪಕಿ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ಗುಬ್ಬಿ (ತುಮಕೂರು ಜಿಲ್ಲೆ)

